# ಎಚ್.ಜಿ.ಸಣ್ಣಗುಡ್ಡಯ್ಯನವರ ಸಾಹಿತ್ಯ
# ಒಂದು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಯು.ಸೀತಾರಾಮಯ್ಯ

ಮಾರ್ಗದರ್ಶಕರು
ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಎಚ್.ಜಿ.ಸಣ್ಣಗುಡ್ಡಯ್ಯನವರ ಸಾಹಿತ್ಯ
# ಒಂದು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಯು.ಸೀತಾರಾಮಯ್ಯ




ಮಾರ್ಗದರ್ಶಕರು
ಡಾ. ರಹಮತ್ ತರೀಕೆರೆ
ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

## ಮಾರ್ಗದರ್ಶಕರ ದೃಢೀಕರಣ ಪತ್ರ

ಎಚ್.ಜಿ.ಸಣ್ಣಗುಡ್ಡಯ್ಯನವರ ಸಾಹಿತ್ಯ : ಒಂದು ವಿಶ್ಲೇಷಣೆ ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಯು.ಸೀತಾರಾಮಯ್ಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ರಹಮತ್ ತರೀಕೆರೆ
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 13-10-2008

# ಸಂಶೋಧಕರ ಪ್ರಮಾಣ ಪತ್ರ

ಎಚ್.ಜಿ.ಸಣ್ಣಗುಡ್ಡಯ್ಯನವರ ಸಾಹಿತ್ಯ : ಒಂದು ವಿಶ್ಲೇಷಣೆ ಎಂಬ ಸಂಪ್ರಬಂಧವನ್ನು ಡಾ.ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Seetsa... u.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಯು.ಸೀತಾರಾಮಯ್ಯ
ಸಂಶೋಧಕ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ನೆನಪುಗಳು

ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ.ಎ.ಮುರಿಗಪ್ಪ, ಕುಲಸಚಿವರಾದ ಡಾ.ಹಿ.ಚಿ.ಬೋರಲಿಂಗಯ್ಯ ಅಧ್ಯಯನಾಂಗದ ನಿರ್ದೇಶಕರಾದ ಡಾ.ಡಿ.ಪಾಂಡುರಂಗಬಾಬು, ಪ್ರಸಾರಾಂಗದ ನಿರ್ದೇಶಕರಾದ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರುಗಳಿಗೆ ಕೃತಜ್ಞತೆಯಿಂದ ನೆನೆಯುತ್ತೇನೆ.

ಹಿಂಜರಿಕೆಯಲ್ಲಿದ್ದಾಗ ನನಗೆ ಉತ್ಸಾಹ, ಪ್ರೇರಣೆ, ಧೈರ್ಯ ತುಂಬಿ ಪ್ರಬಂಧದ ರಚನೆಯ ಪ್ರತಿ ಹಂತದಲ್ಲೂ ನನ್ನನ್ನು ಪ್ರೋತ್ಸಾಹಿಸಿ ಆತ್ಮೀಯವಾಗಿ ನಡೆಸಿಕೊಂಡು ಸೂಕ್ತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ಗುರುಗಳಾದ ಡಾ.ರಹಮತ್ ತರೀಕೆರೆ ಅವರಿಗೆ ಯಾವತ್ತೂ ಕೃತಜ್ಞ. ವಿಭಾಗದ ಮುಖ್ಯಸ್ಥರಾದ ಡಾ.ಬಿ.ಎಂ.ಪುಟ್ಟಯ್ಯ, ವಿಭಾಗದ ಪ್ರಾಧ್ಯಾಪಕರು ಹಾಗೂ ಅಧ್ಯಾಪಕರುಗಳಾದ ಡಾ. ಅಮರೇಶ್ ನುಗಡೋಣಿ, ಡಾ. ವೆಂಕಟೇಶ್ ಇಂದ್ವಾಡಿ, ಡಾ. ಮಲ್ಲಿಕಾರ್ಜುನ ವಣೇನೂರು ಮತ್ತು ವಿಭಾಗದ ಸಿಬ್ಬಂದಿ ವರ್ಗದವರಾದ ಕೊಳೂರು ಶಿವಪ್ಪ, ಹನುಮಂತಪ್ಪ ಇವರುಗಳಿಗೆ.

ಅಕ್ಷರ ಬರೆಯಲು ಒತ್ತು ನೀಡಿದ ನನ್ನ ತಂದೆ, ತಾಯಿ, ತಾತಾ, ಅಕ್ಕ, ಮಾವ, ಮಡದಿ ಪ್ರೇಮಾ, ಮಗಳು ಚಂದು ಹಾಗೂ ನನ್ನ ಕುಟುಂಬದ ವರ್ಗದವರಿಗೆ ವಿಷಯವನ್ನು ವಿಸ್ತರಿಸಿಕೊಳ್ಳಲು ಬೌದ್ಧಿಕ ತಿಳುವಳಿಕೆ ನೀಡಿದ ಡಿ.ಸುಮಿತ್ರ, ಉಪನ್ಯಾಸಕರು ತುಮಕೂರು ಅವರನ್ನು ನೆನೆಯುತ್ತೇನೆ.

ಸಹಪಾಠಿಗಳಾದ ರವಿ ಗೋಮ್ಯಾ, ಭವ್ಯ, ಬೋರಮ್ಮ, ಉಮಾ ಮಹೇಶ್ವರಿ, ವಿಜಯಲಕ್ಷ್ಮಿ, ಕೋಮಲ, ಶಂಕರಲಿಂಗಪ್ಪ ಇವರ ಒಡನಾಟವನ್ನು ಮರೆಯಲಾರೆ.

ಪ್ರಸ್ತುತ ಪ್ರಬಂಧ ರೂಪಗೊಳ್ಳುವ ಸಂದರ್ಭದಲ್ಲಿ ನನಗೆ ಅನೇಕರ ನೆರವು, ಸಹಕಾರ ದೊರೆತಿದೆ, ಅವರೆಲ್ಲರ ಒತ್ತಾಸೆ, ಹಾರೈಕೆಗಳನ್ನು ಇಲ್ಲಿ ಸ್ಮರಿಸುವುದು ನನ್ನ ಕರ್ತವ್ಯವೆಂದು ಭಾವಿಸಿರುತ್ತೇವೆ. ಜೀವ, ರಂರು, ನರೇಂದ್ರ, ಅಪ್ಪಿ, ಸಣ್ಣಒಬಳಯ್ಯ, ಹೊನ್ನಪ್ಪ, ಓಂಕಾರ, ಹಂದ್ರಾಳ್ ಮಾರ್ಕಡೇಯ, ಕುಪ್ಪೇರಾವ್, ಯರಿಯಪ್ಪ, ಹಂದ್ರಾಳ್ ಗವಿಸಿದ್ಧಪ್ಪ, ಸುದೀಪ್, ಜಿ.ಎಂ.ಶರಣಬಸವ, ಶೇಖರಚಾರಿ, ಹನುಮೇಶ್, ವಿರೇಶ್ ಉತ್ತಂಗಿ, ಸುಧಾಕರ, ಈರಣ್ಣ ಹುರುಳಿ, ನಿರಂಜನ ರಾ.ನ., ಹುಲುಗಪ್ಪ, ಗುರುರಾಜ ಮುಗುಳಿ, ಬಸವರಾಜ, ಲಿಂಗಪ್ಪ, ಜಗದೀಶ್, ಪ್ರದೀಪ್, ವೆಂಕಟೇಶ್, ಶಂಕರ್ ಗುರಿಕಾರ್,

ತಿಪ್ಪೇಶಪ್ಪ ಹಾಗೂ ಅನಿಕೇತನ ವಸತಿ ನಿಲಯದ ಎಲ್ಲಾ ಗೆಳೆಯಂದಿರನ್ನು ಮತ್ತು ರತ್ನಕ್ಕನವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ಪ್ರಬಂಧ ರಚನೆಯ ಸಂದರ್ಭದಲ್ಲಿ ಗ್ರಂಥಾಲಯದಲ್ಲಿ ಸಹಕರಿಸಿದ ಡಾ.ನಾಗವೇಣಿ ಗಣೇಶ್, ನಾಗನಾಯ್ಕ ಮತ್ತು ಸಿಬ್ಬಂದಿ ವರ್ಗದವರನ್ನು ನೆನೆಯುತ್ತೇನೆ.

ಅಕ್ಷರ ಸಂಯೋಜನೆ ಮಾಡಿಕೊಟ್ಟ ಶ್ರೀಮತಿ ಬಿ.ರಶ್ಮಿಕೃಪಾಶಂಕರ್ ಅವರಿಗೆ

*ಕೃತಜ್ಞತೆಗಳು*

ಯು.ಸೀತಾರಾಮಯ್ಯ

# ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಮಹತ್ವ, ಉದ್ದೇಶ ಮತ್ತು ವ್ಯಾಪ್ತಿ

೧.೧. ಮಹತ್ವ ಮತ್ತು ಉದ್ದೇಶ

೧.೨. ವ್ಯಾಪ್ತಿ

೧.೩. ಅಧ್ಯಯನ ವಿಧಾನ

೧.೪. ಇದುವರೆಗೆ ಬಂದ ಅಧ್ಯಯನಗಳ ಸಮೀಕ್ಷೆ

# ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಮಹತ್ವ ಮತ್ತು ಉದ್ದೇಶ

**ಪೀಠಿಕೆ**

ತುಮಕೂರು ಸೀಮೆಯಲ್ಲಿ 'ಎಚ್.ಜಿ.ಎಸ್.' ಎಂದೇ ಕರೆಯಲ್ಪಡುವ ಪ್ರೊ.ಸಣ್ಣಗುಡ್ಡಯ್ಯನವರು ಜನಪ್ರಿಯ ಪ್ರಾಧ್ಯಾಪಕರಾಗಿಯೂ ಲೇಖಕರಾಗಿಯೂ ಪ್ರಸಿದ್ಧರಾಗಿದ್ದವರು. ಕಾವ್ಯ ಮತ್ತು ಪ್ರಬಂಧ ಪ್ರಕಾರಗಳಲ್ಲಿ ಸಣ್ಣಗುಡ್ಡಯ್ಯನವರು ಪ್ರಕಟಿಸಿರುವ ಸೃಜನಶೀಲತೆ ಅವರನ್ನು ಸಾಹಿತ್ಯ ವಲಯದಲ್ಲಿ ಗುರುತಿಸುವಂತೆ ಮಾಡಿತು. ಇದಕ್ಕೆ ಅವರು ಸಾಹಿತ್ಯದ ಪ್ರಾಧ್ಯಾಪಕರಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಪ್ರೇರೇಪಿಸಿರುವುದು ಅವರ ಜನಪ್ರಿಯತೆಗೆ ಕಾರಣವಾಗಿದೆ.

ಹೊಸ ತಲೆಮಾರಿನ ಕನ್ನಡ ಕವಿ ಎಸ್.ನಟರಾಜ್ ಬೂದಾಳು ಅವರು "ಎಚ್.ಜಿ. ಎಂದು ಪ್ರಸಿದ್ಧರಾಗಿದ್ದ ಶ್ರೀಯುತರು 'ಎಚ್' ಎಂದು ಬರೆದರೆ ಅವರ ತೂಕವನ್ನು ಅವರ ಸಣಕಲು ದೇಹ ತಾಳಲಾರದೆಂದು ಮಾತಾನಾಡಿಕೊಳ್ಳುತ್ತಿದ್ದೆವು"[೧] ಎಂದು ವಿನೋದದಿಂದ ಬರೆಯುತ್ತಾರೆ. ಎಚ್.ಜಿ. ಸಣ್ಣಗುಡ್ಡಯ್ಯನವರು ತುಮಕೂರು ಜಿಲ್ಲೆಯವರೇ ಆದ ವಿದ್ವಾಂಸರೂ, ಸಂಶೋಧಕರೂ ಆದ ಪ್ರೊ. ತೀ.ನಂ.ಶ್ರೀ ಮತ್ತು ಡಿ.ಎಲ್. ನರಸಿಂಹಚಾರ್ ಅವರ ಶಿಷ್ಯರಾಗಿ ಬೆಳೆದಂಥವರು. ಸಣ್ಣ ಗುಡ್ಡಯ್ಯನವರು ತೀ.ನಂ.ಶ್ರೀ.ಯವರ ಬಗ್ಗೆ ಅಪಾರ ಗೌರವ ಹೊಂದಿದ್ದರು.

ಪ್ರಸ್ತುತ ಅಧ್ಯಯನಕ್ಕಾಗಿ ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯನವರ ಸಾಹಿತ್ಯವನ್ನು ತೆಗೆದುಕೊಳ್ಳಲಾಗಿದೆ. ಅವರು ತಮ್ಮ ಗುರುಗಳಾದ ತೀ.ನಂ.ಶ್ರೀ.ಯವರ ಹಾಗೆ ಹೆಚ್ಚು ಬರೆಯದೇ ಇದ್ದರೂ ಬರೆದಂಥ ಬರೆಹದಲ್ಲಿ ಗಟ್ಟಿತನವನ್ನು ಪ್ರಕಟಿಸಿದವರು. ಸೃಜನಶೀಲ ಶಕ್ತಿಯು ಒಬ್ಬ ವ್ಯಕ್ತಿಯಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಗೊಳ್ಳುವುದು ಅಪರೂಪ. ಅಂಥ ಅಪರೂಪದ ವ್ಯಕ್ತಿಗಳಲ್ಲಿ ಶ್ರೀಯುತರು ಒಬ್ಬರೆಂದು ಹೇಳಬಹುದು. ಗೋಪಾಲಕೃಷ್ಣ ಅಡಿಗ, ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ, ಗಂಗಾಧರ ಚಿತ್ತಾಲ, ಇವರೆಲ್ಲರೂ ಶ್ರೀಯುತರ ನೆಚ್ಚಿನ ಕವಿಗಳಾಗಿದ್ದವರು. ಇವರ ಸಾಹಿತ್ಯ ಸೃಷ್ಟಿಗೆ ಪರೋಕ್ಷವಾಗಿ ಪ್ರೇರಕರಾಗಿದ್ದವರು.

ಸಣ್ಣಗುಡ್ಡಯ್ಯನವರು ತಾವು ಬದುಕಿ ಬಾಳಿದ ತುಮಕೂರು ಪ್ರದೇಶದಲ್ಲಿ ಒಂದು ಆರೋಗ್ಯಕರ ಪರಿಸರವನ್ನು ನಿರ್ಮಾಣ ಮಾಡಿದರು. ಸಣ್ಣ ಗುಡ್ಡಯ್ಯನವರು ತುಮಕೂರು ನಗರದಲ್ಲಿ ಮಾರ್ಕ್ಸ್‌ವಾದ ಬೇರುಬಿಡಿಸುವುದರಲ್ಲಿ ತೋರಿದ ಶ್ರದ್ಧೆ, ಪರಿಶ್ರಮ ಅನನ್ಯವಾದುದು. ಅನೇಕ ಸಹೃದಯ ವಿಚಾರವಂತರು ಅವರ ಚಿಂತನಾ ಕೇಂದ್ರಕ್ಕೆ ಸೇರುತ್ತಿದ್ದರು. ಸಣ್ಣಗುಡ್ಡಯ್ಯ ಅವರು ನಾಡು, ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಇಲ್ಲಿ ಮಂಥನ ಕಾರ್ಯ ನಡೆಸುತ್ತಿದ್ದರು. ವಿಚಾರಗಳಿಂದ ಪ್ರಭಾವಿತರಾಗಿ ಈ ಭಾಗದಲ್ಲಿ ಹಲವಾರು ಚಿಂತಕರು ರೂಪುಗೊಳ್ಳಲು ಸಾಧ್ಯವಾಯಿತು. ಟಿ.ಎಸ್.ಲೋಹಿತಾಶ್ವ, ಬರಗೂರು ರಾಮಚಂದ್ರಪ್ಪ, ಎಸ್. ನಟರಾಜ್ ಬೂದಾಳ್, ಕೆ.ಬಿ.ಸಿದ್ದಯ್ಯ, ಎಸ್.ಜಿ.ಸಿದ್ಧರಾಮಯ್ಯ ಮುಂತಾದ ಅನೇಕ ಬರಹಗಾರರು ಮತ್ತು ನಟರು ಸಣ್ಣಗುಡ್ಡಯ್ಯನವರ ಶಿಷ್ಯರು. ಬರಗೂರು ರಾಮಚಂದ್ರಪ್ಪನವರು "ಸಣ್ಣ ಗುಡ್ಡಯ್ಯನವರು ಬರವಣಿಗೆಯ ಆರಂಭದ ದಿನಗಳಲ್ಲಿ ನನ್ನಂಥ ಅನೇಕರಿಗೆ ಉತ್ತೇಜಿತರಾಗಿದ್ದವರು. ಹಾಗೆಯೇ ಶಿಷ್ಯರ ಮೇಲೆ ಮುಕ್ಕಾಗದ ಮಮತೆ ಹೊಂದಿದಂಥವರು"[೨] ಎಂದು ತಮ್ಮದೊಂದು ಲೇಖನದಲ್ಲಿ ಹೇಳುತ್ತಾರೆ.

ಪರಂಪರೆ ಎನ್ನುವುದು ಅತ್ಯಂತ ವ್ಯಾಪಕವಾದ ಹಾಗೆಯೇ ಮಹತ್ವವುಳ್ಳ ಪರಿಕಲ್ಪನೆಯಾಗಿದೆ. ಈ ಪರಂಪರೆಯನ್ನು ಪಿತ್ರಾರ್ಜಿತವಾಗಿ ಪಡೆಯಲಾಗುವುದಿಲ್ಲ. ಸ್ವಯಾರ್ಜಿತ ಆಂಗ್ಲಕವಿ ಮತ್ತು ಚಿಂತಕ ಎಂದು ಟಿ.ಎಸ್.ಎಲಿಯತ್ ತನ್ನ 'ಪರಂಪರೆ ಮತ್ತು ವ್ಯಕ್ತಿಪ್ರತಿಭೆ' ಎಂಬ ಲೇಖನದಲ್ಲಿ ಹೇಳುತ್ತಾನೆ. ಹೀ ಪಾಂಡಿತ್ಯಪಡೆದಂತಹ ಒಂದು ಗುರುಪರಂಪರೆಯಲ್ಲಿ ಬಂದವರು ಮತ್ತು ತಾವೂ ಒಂದು ಪರಂಪರೆಯಾದವರು ಎಚ್.ಜಿ.ಸಣ್ಣಗುಡ್ಡಯ್ಯನವರು.

ಎಚ್.ಜಿ. ಸಣ್ಣಗುಡ್ಡಯ್ಯನವರು ತಮ್ಮ ಸರಳತೆ ಮತ್ತು ನಿಷ್ಠುರವಾದಿ ವ್ಯಕ್ತಿತ್ವದಿಂದ ಹೆಸರಾದವರು. ಜಾತಿಮತಗಳ ಕೊಳಕಿನಾಚೆ ನಿಂತು ಎತ್ತರಕ್ಕೆ ಬೆಳೆದವರು ಜಾತ್ಯತೀತ ಗುಣದಿಂದ ತಮ್ಮದೇ ಆದ ಸಿದ್ಧಾಂತಕ್ಕಾಗಿ ಬದುಕಬೇಕೆಂದು ಹಠ ತೊಟ್ಟಂಥವರು. ತಾವು ನಂಬಿದ ರೀತಿಯಲ್ಲಿ ಬಾಳಿ ಸಾಹಿತ್ಯ ರಚಿಸಿದವರು. ಆದರ್ಶವಾದಿಯಾಗಿ ಬಾಳಿ ಅದಕ್ಕೆ ಒಪ್ಪುವ ವೈಚಾರಿಕತೆಯನ್ನು ರೂಢಿಸಿಕೊಂಡವರು. ಜತೆಗೆ ಸಾಹಿತ್ಯ ಕೃಷಿ, ಸಾಹಿತ್ಯ ಅಧ್ಯಯನ ಮತ್ತು ಬೋಧನೆಗಳ ಮೂಲಕ ಗ್ರಾಮೀಣ ಭಾಗದಲ್ಲಿ ಒಂದು ಸಾಹಿತ್ಯಕ ಪರಿಸರವನ್ನು ನಿರ್ಮಾಣ ಮಾಡಿದವರು. ಇಂತಹ ಸಾಧಕರು ಕರ್ನಾಟಕದಲ್ಲಿ ಕಡಿಮೆ.

ಎಚ್.ಜಿ. ಸಣ್ಣಗುಡ್ಡಯ್ಯನವರನ್ನು ಹತ್ತಿರದಿಂದ ಕೊಂಡಂಥ ಬರಗೂರು ರಾಮಚಂದ್ರಪ್ಪನವರು "ತುಮಕೂರು ಪರಿಸರಗಳ ತಮ್ಮ ಒಳನೋಟ ಮತ್ತು ವಾರೆನೋಟಗಳಿಂದ ಪರ್ಯಾಯ ಸಾಧ್ಯತೆಗಳನ್ನು ತೆರೆದವರು ಸಣ್ಣ ಗುಡ್ಡಯ್ಯ, ವೀಚಿ ಮತ್ತು ಕೆ.ಆರ್.ನಾಯಕ್ ಎಂಬ ಸಂಕೇತಗಳು. ಇಂಥ ಸಂಕೇತಗಳು ಅನೇಕ ಊರುಗಳಲ್ಲಿರುತ್ತವೆ. ಆದ್ದರಿಂದ ಇಂಥ ಸಂಕೇತಗಳನ್ನು ಸರಿಯಾಗಿ ಗುರುತಿಸುವ, ವಿವರಿಸುವ ಮತ್ತು ವಿಶ್ಲೇಷಿಸುವ ಸ್ಥಳೀಯ ಇತಿಹಾಸ ರಚನೆಯು ನಮ್ಮ ಸಮಕಾಲೀನ ಅಗತ್ಯವಾಗಿದೆ. ಆದುದರಿಂದ ಮೇಷ್ಟ್ರಿಗೆ ಇತಿಹಾಸದಲ್ಲಿ ಪ್ರಮುಖ ಸ್ಥಾನವೊಂದು ಇರಬೇಕಾಗುತ್ತದೆ"[೩] ಎಂದಿದ್ದಾರೆ.

ಇಂಥ ''ಹೆಸರಾಗಿಯೂ ಹೇಳ ಹೆಸರಿಲ್ಲದ ದುರ್ದೈವಿ''ಯಾದ ಸಣ್ಣಗುಡ್ಡಯ್ಯನವರನ್ನು ಸಾಹಿತ್ಯ ಪ್ರಪಂಚಕ್ಕೆ ಪರಿಚಯಿಸುವ ಪರಾಮರ್ಶಿಸುವ ಅವಶ್ಯಕತೆಯನ್ನು ಮಾಡುವುದೇ ಈ ಅಧ್ಯಯನದ ಉದ್ದೇಶವಾಗಿದೆ.

ಸಣ್ಣಗುಡ್ಡಯ್ಯನವರಂಥ ಲೇಖಕರು ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯನ್ನು ಬಹಳ ದೊಡ್ಡ ಸ್ಥಾನವನ್ನು ಪಡೆಯದೇ ಇರಬಹುದು. ಆದರೆ ತಾವು ವಾಸ ಮಾಡಿದ ಪ್ರದೇಶದಲ್ಲಿ ಆರೋಗ್ಯಕರವಾದ ಸಮಾಜವನ್ನು ಕಟ್ಟಲು ಬೇಕಾದ ಚಿಂತನೆಗಳನ್ನು ರೂಪಿಸಿಕೊಟ್ಟವರು; ತಮ್ಮ ಪಾಠದ ಮೂಲಕ ಹಲವಾರು ತರುಣ ಮನಸ್ಸುಗಳನ್ನು ಬೆಳೆಸಿದಂಥವರು. ತಮ್ಮ ನೈತಿಕ ವ್ಯಕ್ತಿತ್ವದ ಮೂಲಕ ಕಿರಿಯ ತಲೆಮಾರಿಗೆ ಒಂದು ಆದರ್ಶ ಮಾದರಿಯಾದವರು. ಸಣ್ಣಗುಡ್ಡಯ್ಯನವರ ಬರಹ-ಬದುಕು ಅಧ್ಯಾಪನ ಮೂರು ಸಂಗತಿಗಳು ಒಟ್ಟಿಗೆ ಒಂದು ಜೀವಂತ ಪರಿಸರ ನಿರ್ಮಾಣ ಮಾಡುವಲ್ಲಿ ದುಡಿದವು.

ತಮ್ಮ ಸುತ್ತಲಿನ ಪರಿಸರವನ್ನು ಕಟ್ಟುವುದು ಬಹಳ ಮುಖ್ಯ ಆದಾಗ ತಮ್ಮ ಬರಹದ ಮೂಲಕ ಬರಹಕ್ಕೆ ಪ್ರತಿಫಲ ಪಡೆಯುವ ಕಡೆ ಮನಸ್ಸು ತುಡಿಯುವುದಿಲ್ಲ. ಸಣ್ಣ ಗುಡ್ಡಯ್ಯನವರು ಹಾಗೆ ಯಾವ ಪ್ರಚಾರಕ್ಕೂ ಎಳೆಸದೆ 'ಎಲೆ ಮರೆ ಕಾಯಿಯಂತೆ' ಇದ್ದುಕೊಂಡು ಗ್ರಾಮೀಣ ಭಾಗದಿಂದ ಬರುತ್ತಿದ್ದ ವಿದ್ಯಾರ್ಥಿಗಳಿಗೆ ಸಾಹಿತ್ಯ ದೀಕ್ಷೆಯನ್ನು ವೈಚಾರಿಕ ದೀಕ್ಷೆಯನ್ನು ನೀಡಿದರು. ಈ ಕಾರಣಕ್ಕಾಗಿ ಸಣ್ಣ ಗುಡ್ಡಯ್ಯನವರಂಥ ಸ್ಥಳೀಯ ಲೇಖಕರು ಸಾಂಸ್ಕೃತಿಕವಾಗಿ ಮಹತ್ವದವರಾಗಿದ್ದಾರೆ.

## ೧.೨. ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಲೇಖಕ ಕೇಂದ್ರಿತ ಅಧ್ಯಯನವಾಗಿದೆ. ಆದರೂ ಪ್ರಸ್ತುತ ಪ್ರಬಂಧದಲ್ಲಿ ಲೇಖಕರ ಎಲ್ಲಾ ಕೃತಿಗಳನ್ನು ವಿಮರ್ಶಿಸಲು ಸಾಧ್ಯವಾಗಿಲ್ಲ. ಆದರೆ ಅವರ ಕೃತಿಗಳನ್ನು ಮತ್ತು ಅವರನ್ನು ಕುರಿತು ಬಂದಿರುವ ಲೇಖನಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಸಣ್ಣಗುಡ್ಡಯ್ಯನವರ ಪ್ರಾತಿನಿಧಿಕವೆನಿಸುವ ಪ್ರಬಂಧಗಳನ್ನು ಮತ್ತು ಕವಿತೆಗಳನ್ನು ಆಯ್ದುಕೊಂಡು ಪ್ರಸ್ತುತ ಸಂಪ್ರಬಂಧವನ್ನು ರಚಿಸಲಾಗಿದೆ.

ಈ ಅಧ್ಯಯನದಲ್ಲಿ ೫ ಅಧ್ಯಾಯಗಳಿವೆ. ಸಣ್ಣಗುಡ್ಡಯ್ಯನವರ 'ಲಲಿತ ಪ್ರಬಂಧಗಳ ಸ್ವರೂಪ' ಎಂಬ ವಿಷಯವನ್ನು ಇಟ್ಟುಕೊಂಡು ''ಹದ್ದು ಮತ್ತು ಇತರ ಪ್ರಬಂಧಗಳು'' (ತಿಪಟೂರು ನಮ್ಮ ಪ್ರಕಾಶನ ೧೯೯೮) ''ಏಕಾಂತ ಮತ್ತು ಇತರ ಪ್ರಬಂಧಗಳು''(ಕಾಮಧೇನು ಪ್ರಕಾಶನ, ತುಮಕೂರು ೨೦೦೪) ಕೃತಿಗಳನ್ನು ಅಧ್ಯಯನ ಮಾಡಲಾಗಿದೆ.

''ಸಣ್ಣ ಗುಡ್ಡಯ್ಯನವರ ಕಾವ್ಯದ ಸ್ವರೂಪ'' ಎಂಬ ಅಧ್ಯಾಯಕ್ಕೆ ಸಂಬಂಧಿಸಿದಂತೆ ಅವರ ಮೊದಲ ಕವನ ಸಂಕಲನವಾದ 'ಅಭೀಪ್ಸೆ'(ಅಕ್ಷಯ ಪ್ರಕಾಶನ, ತುಮಕೂರು, ೧೯೬೧), ಎರಡನೆಯ

ಕವನ ಸಂಕಲನವಾದ ''ವಸಂತದ ಕನಸುಗಳು'' ಹಾಗೂ ಮೂರನೆಯ ಕವನ ಸಂಕಲನವಾದ 'ಭಿನ್ನ' (ಅಕ್ಷಯ ಪ್ರಕಾಶನ, ತುಮಕೂರು, ೨೦೦೪)ಕೃತಿಗಳನ್ನು ಆರಿಸಿಕೊಂಡಿದೆ.

ಈ ಅಧ್ಯಯನದಲ್ಲಿ ಕೈಬಿಟ್ಟಿರುವ ಸಣ್ಣಗುಡ್ಡಯ್ಯನವರ ಕೃತಿಗಳೆಂದರೆ 'ಭಾಸ ರಾಮಾಯಣ' (ಪ್ರತಿಮಾ ನಾಟಕದ ಪರಿಷ್ಕೃತ ಕಥನ ರೂಪಕ ಅಕ್ಷಯ ಪ್ರಕಾಶನ ತುಮಕೂರು ೨೦೦೪) 'ಹೊಸಗನ್ನಡ ಸ್ವಪ್ನ ವಾಸವದತ್ತ'(ಭಾಸಕವಿಯ ಸಂಸ್ಕೃತ ನಾಟಕದ ಅನುವಾದ, ಅಕ್ಷಯ ಪ್ರಕಾಶನ, ತುಮಕೂರು, ೨೦೦೬), 'ತೀ.ನಂ.ಶ್ರೀಕಂಠಯ್ಯ'(ಪಂಪ ಪ್ರಶಸ್ತಿ ಪುರಸ್ಕೃತ ಪ್ರೊ.ತೀ.ನಂ.ಶ್ರೀ. ಜೀವನ ವ್ಯಕ್ತಿತ್ವ ಮತ್ತು ಕೃತಿಗಳ ಸಮೀಕ್ಷೆ, ಅಕ್ಷಯ ಪ್ರಕಾಶನ, ತುಮಕೂರು, ೧೯೬೧), 'ಪಾರಿಜಾತ'( ಹೊಸಗನ್ನಡ ಪ್ರಣಯ ಕವಿತೆಗಳ ಸಂಕಲನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨); ಇವನ್ನು ಕೈಬಿಡಲು ಕಾರಣ ಇವು ಅನುವಾದಿತ ಮತ್ತು ಸಂಪಾದಿತ ಕೃತಿಗಳಾಗಿರುವುದು. ಅನುವಾದಿತ ಮತ್ತು ಸಂಪಾದಿತ ಕೃತಿಗಳಲ್ಲಿಯೂ ಕೂಡ ಲೇಖಕರ ಸಾಹಿತ್ಯಕ ಮತ್ತು ಸಾಮಾಜಿಕ ಧೋರಣೆಗಳು ವ್ಯಕ್ತವಾಗುತ್ತವೆ. ಆದರೂ ಅವರು ಬರೆದ ಸೃಜನಶೀಲ ಕೃತಿಗಳಲ್ಲಿ ಅವರ ನಿಲುವು ಹೆಚ್ಚು ಸ್ಪಷ್ಟವಾಗಿ ಮತ್ತು ಪ್ರಖರವಾಗಿ ಪ್ರಕಟವಾಗುತ್ತದೆ. ಈ ಕಾರಣದಿಂದ ಸಣ್ಣ ಗುಡ್ಡಯ್ಯನವರ ಪ್ರಬಂಧಗಳು ಮತ್ತು ಕಾವ್ಯಗಳಿಗೆ ಮಾತ್ರ ಚರ್ಚೆಯನ್ನು ಕೇಂದ್ರೀಕರಿಸಿದೆ.

## ೧.೩. ಅಧ್ಯಯನ ವಿಧಾನ

ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಇರುವ ಲೇಖಕ ಕೇಂದ್ರಿತ ಅಧ್ಯಯನಗಳಲ್ಲಿ ಎರಡು ಮಾದರಿಗಳಿವೆ. ೧. ಲೇಖಕರ ಜೀವನ ವಿವರಗಳನ್ನು ಇಟ್ಟುಕೊಂಡು ಮಾಡುವ ಅಧ್ಯಯನ. ೨. ಲೇಖಕರ ಕೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ಮಾಡುವ ಅಧ್ಯಯನ. ಇವುಗಳಲ್ಲಿ ಮೊದಲನೆಯದಾದ ಚಾರಿತ್ರಿಕ ಅಧ್ಯಯನ ವಿಧಾನವನ್ನು ಕೈಬಿಟ್ಟು ಎರಡನೆಯದಾದ ಕೃತಿ ಕೇಂದ್ರಿತ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಹಾಗೆಂದು ಲೇಖಕರ ಜೀವನ ವಿವರಗಳನ್ನು ಪೂರ್ಣವಾಗಿ ಕೈಬಿಟ್ಟಿಲ್ಲ. ಬರಹಗಾರನ ವ್ಯಕ್ತಿತ್ವ ಇತರರಿಗಿಂತ ಭಿನ್ನವಾದುದು. ಬರಹಗಾರನ ರಚನೆಗೂ ಅವರ ವ್ಯಕ್ತಿತ್ವಕ್ಕೂ ಬಿಡಿಸಲಾರದ ನಂಟಿರುತ್ತದೆ. ಅವರ ಸಾಹಿತ್ಯ ಕೃತಿಯಲ್ಲಿ ಸಮಾಜದಲ್ಲಿರುವ ಮಾನವ ಸಂಬಂಧಗಳ ತಿಳಿವಳಿಕೆ ಇರುತ್ತದೆ. ಅದು ಲೇಖಕರ ಮುಖೇನ ಅಭಿವ್ಯಕ್ತಿಯಾಗುವುದರಿಂದ ಅದಕ್ಕೊಂದು ಸಾಂಸ್ಕೃತಿಕ ವಿಶಿಷ್ಟತೆ ಒದಗುತ್ತದೆ.

ಯಾವುದೇ ಸಾಹಿತ್ಯ ಕೃತಿ ಅದರ ಕರ್ತೃವಿನ ಪ್ರಜ್ಞೆ ಮತ್ತು ಅಪ್ರಜ್ಞೆಯ ಸ್ತರಗಳೆರಡೂ ಕೂಡಿದ ವಿನ್ಯಾಸದೊಂದಿಗೆ ರಚನೆಯಾಗಿರುತ್ತದೆ. ಇವುಗಳನ್ನು ಅನುಲಕ್ಷಿಸಿದರೆ ಕೃತಿಗೂ, ಕರ್ತೃವಿಗೂ ವಿಚಿತ್ರ ಅಂತರ್ ಸಂಬಂಧವಿರುತ್ತದೆ. ಆದುದರಿಂದ ಕರ್ತೃವಿನ ವ್ಯಕ್ತಿತ್ವದ ಪರಿಚಯದೊಂದಿಗೆ ಕೃತಿಯನ್ನು

ಗ್ರಹಿಸುವುದು ಹೆಚ್ಚು ಅರ್ಥಪೂರ್ಣವಾದುದಾಗಿದೆ. ಹಾಗೆಯೇ ಲೇಖಕನ ಕೃತಿಯನ್ನು ಬೇರೆ ಬೇರೆ ಆಯಾಮಗಳಿಂದ ವಿಶ್ಲೇಷಿಸಬೇಕೆಂಬುದು ಸಾಂಸ್ಕೃತಿಕ ಅಧ್ಯಯನ ವಿಧಾನದ ಮುಖ್ಯ ಸಂಗತಿಯಾಗಿದೆ. ಅಧ್ಯಯನವನ್ನು ಈ ಬಗೆಯ ಕೃತಿಕೇಂದ್ರಿತ ಸಾಂಸ್ಕೃತಿಕ ವಿಧಾನದಲ್ಲಿ ಅಧ್ಯಯನ ಮಾಡಲು ಯತ್ನಿಸಲಾಗಿದೆ.

ಸಣ್ಣ ಗುಡ್ಡಯ್ಯನವರ ಕೃತಿಗಳ ಅಧ್ಯಯನದಲ್ಲಿ ತೌಲನಿಕ ಕ್ರಮವನ್ನು ಅಳವಡಿಸಿಕೊಂಡಿಲ್ಲ. ಒಬ್ಬ ಲೇಖಕ ತಮ್ಮ ಸಮಕಾಲೀನ ಲೇಖಕರಿಗಿಂತ ಹೇಗೆ ಭಿನ್ನವಾಗಿ ಬರೆದಿದ್ದಾರೆ ಮತ್ತು ಇಬ್ಬರೂ ಲೇಖಕರು ಸಾಹಿತ್ಯ ಪರಿಸರ ನಿರ್ಮಾಣದಲ್ಲಿ ತೋರುವ ಭಿನ್ನತೆ ಏನು ಎಂಬುದನ್ನು ಇಲ್ಲಿ ವಿಶ್ಲೇಷಿಸುವುದು ಈ ವಿಧಾನದ ಲಕ್ಷಣ. ಹಾಗೆ ಮಾಡುವುದರಿಂದ ಸಂಪ್ರಬಂಧವನ್ನು ಅತಿ ವ್ಯಾಪ್ತಿಗೆ ದೂಡಿದಂತಾಗುವುದು. ಹೀಗಾಗಿ ಸಣ್ಣಗುಡ್ಡಯ್ಯನವರ ಕೃತಿಗಳನ್ನಷ್ಟೆ ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದೆ.

ಕನ್ನಡ ಸಾಹಿತ್ಯ ಅಧ್ಯಯನದಲ್ಲಿ ಮತ್ತೂ ಎರಡು ವಿಧಾನಗಳಿವೆ. ೧. ಲೇಖಕರ ಮುಖ್ಯ ಕೃತಿಗಳನ್ನು ಇಟ್ಟುಕೊಂಡು ತಾತ್ವಿಕವಾಗಿ ಮಾಡುವ ಸಾಮಾನ್ಯ ಚರ್ಚೆಯ ವಿಧಾನ. ೨. ಒಂದು ನಿರ್ದಿಷ್ಟ ಕೃತಿಯನ್ನು ಇಟ್ಟುಕೊಂಡು ಮಾಡುವ ಪ್ರಾಯೋಗಿಕ ವಿಮರ್ಶೆ ವಿಧಾನ.

ಪ್ರಸ್ತುತ ಅಧ್ಯಯನದಲ್ಲಿ ಸಾಮಾನ್ಯ ಚರ್ಚೆಯ ವಿಧಾನವನ್ನು ಆಳವಡಿಸಿಕೊಳ್ಳಲಾಗಿದೆ. ಅಂದರೆ ಇಲ್ಲಿ ಕೃತಿಯ ಒಳಗಿರುವ ಮುಖ್ಯ ಅಂಶಗಳನ್ನು ಇಟ್ಟುಕೊಂಡು ಲೇಖಕರ ಒಟ್ಟು ನಿಲುವುಗಳನ್ನು ಕುರಿತು ವಿಶ್ಲೇಷಿಸಲಾಗುತ್ತದೆ. ಹಾಗೆಯೇ ಪ್ರಸ್ತುತ ಅಧ್ಯಯನದಲ್ಲಿ ಕೇವಲ ಮೆಚ್ಚುವ ಅಥವಾ ಟೀಕಿಸುವ ವಿಧಾನ ಬಿಟ್ಟುಕೊಟ್ಟು ಇತಿಮಿತಿಗಳೆರಡನ್ನೂ ನೋಡುವ ವಿಮರ್ಶಾತ್ಮಕ ವಿಧಾನವನ್ನು ಬಳಸಲಾಗಿದೆ.

ಸಣ್ಣಗುಡ್ಡಯ್ಯನವರು ಯಾವುದೇ ಮತಧರ್ಮಕ್ಕೆ ಸಿಲುಕದೆ ತಮಗೆ ತೋಚಿದ್ದನ್ನು ನೇರವಾಗಿ ಖಚಿತವಾಗಿ ಬರೆದವರು. ನವೋದಯ ಕಾಲಘಟ್ಟದಲ್ಲಿ ಬದುಕಿದ್ದರೂ ಉನ್ನತ ಆದರ್ಶದ ಪ್ರಭಾವಕ್ಕೆ ಒಳಗಾಗದೇ ಗ್ರಾಮೀಣ ಜೀವನಕ್ಕೆ ಮಾರು ಹೋದವರು. ಗ್ರಾಮೀಣ ಜೀವನ ಪರಿಸರದಲ್ಲಿಯೇ ಕಾಣಬರುವ ಸ್ನೇಹ, ಸರಳತೆಗಳು ಅವರನ್ನು ಚೈತನ್ಯಶೀಲರನ್ನಾಗಿ ಮಾಡಿವೆ. ಆದ್ದರಿಂದ ಸಣ್ಣಗುಡ್ಡಯ್ಯನವರು ಧರ್ಮದ ಕುರಿತು ವ್ಯಾಖ್ಯಾನ ಸೀಮಿತವಾಗಿ ನಿಲ್ಲದೆ ವಿಚಾರ ಪೂರ್ಣವಾಗಿ ವಿಸ್ತಾರವಾಗುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಸಣ್ಣಗುಡ್ಡಯ್ಯನವರ ಬರಹದ ಸಾಹಿತ್ಯಕ ಮಹತ್ವಕ್ಕಿಂತ ವೈಚಾರಿಕ ಮಹತ್ವವನ್ನು ಶೋಧಿಸುವ ವಿಧಾನಕ್ಕೆ ಹೆಚ್ಚು ಒತ್ತು ಕೊಡಲಾಗಿದೆ.

ಪ್ರಸ್ತುತ ಅಧ್ಯಯನವು ಅಂತಿಮವಾಗಿ ಸಾಹಿತ್ಯ ಕೃತಿಯೊಂದನ್ನು ಹಲವು ಮಗ್ಗುಲುಗಳಲ್ಲಿ ವಿಶ್ಲೇಷಣೆ ಮಾಡುವ ವಿಧಾನವನ್ನು ಅನುಸರಿಸುವುದಕ್ಕೆ ಯತ್ನಿಸುತ್ತದೆ. ಹಾಗೆಯೇ ಲೇಖಕರು ಕೃತಿಗಳಲ್ಲಿ

ವರ್ತಮಾನ ಸಮಾಜ ಕುರಿತು ತಳೆವ ನಿಲುವುಗಳನ್ನು ಪರಿಶೀಲಿಸಲು ಯತ್ನಿಸುತ್ತದೆ. ಇದಕ್ಕೆ ಪೂರಕವಾಗಿ ಸಣ್ಣಗುಡ್ಡಯ್ಯನವರ ಮೇಲೆ ಈ ತನಕ ಬಂದ ಪರ ಮತ್ತು ವಿರುದ್ಧ ಅಭಿಪ್ರಾಯಗಳನ್ನು ಚರ್ಚೆಯಲ್ಲಿ ಒಳಗೊಳ್ಳಲು ಯತ್ನಿಸುತ್ತದೆ.

ಈ ಹಿನ್ನೆಲೆಯಲ್ಲಿ ಸಣ್ಣಗುಡ್ಡಯ್ಯನವರ ಸಾಹಿತ್ಯವನ್ನು ಕೆಳಕಂಡ ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಮೊದಲನೆಯ ಅಧ್ಯಾಯದಲ್ಲಿ ಸಣ್ಣಗುಡ್ಡಯ್ಯನವರ ಲಲಿತಪ್ರಬಂಧಗಳಲ್ಲಿರುವ ಚಿಂತನಶೀಲತೆ, ಬಾಲ್ಯಕಾಲದ ನೆನಪುಗಳು ಹಾಗೂ ಪ್ರಕೃತಿವರ್ಣನೆಗಳನ್ನು ಮುಖ್ಯವಾಗಿಟ್ಟುಕೊಂಡು ಚರ್ಚೆ ಮಾಡಲಾಗಿದೆ.

೨. ಎರಡನೆಯ ಅಧ್ಯಾಯದಲ್ಲಿ ಸಣ್ಣಗುಡ್ಡಯ್ಯನವರ ಕಾವ್ಯದ ಸ್ವರೂಪ, ಅವರ ಕಾವ್ಯದಲ್ಲಿ ಬರುವ ನಿಸರ್ಗಾನುಸಂಧಾನ, ವಾಸ್ತವ ಬದುಕಿನ ಚಿತ್ರಣ ಹಾಗೂ ಪ್ರೇಮವನ್ನು ಕುರಿತು ಚರ್ಚಿಸಲಾಗುವುದು.

೩. ಮೂರನೆಯ ಅಧ್ಯಾಯದಲ್ಲಿ ಸಣ್ಣಗುಡ್ಡಯ್ಯನವರ ಒಟ್ಟಾರೆ ವೈಚಾರಿಕ ಚಿಂತನೆಗಳನ್ನು ವಿಶ್ಲೇಷಣೆ ಮಾಡಲಾಗಿದೆ.

**ಇದುವರೆಗೆ ಬಂದ ಅಧ್ಯಯನಗಳ ಸಮೀಕ್ಷೆ**

ಸಣ್ಣ ಗುಡ್ಡಯ್ಯನವರ ಸಾಹಿತ್ಯದ ಮೇಲೆ ಬಹಳ ವಿಮರ್ಶೆಗಳು ಬರಲಿಲ್ಲ. ಹೆಚ್ಚಿನ ವಿಮರ್ಶೆಗಳು ಅವರು ನಿಧನರಾದ ಸಂದರ್ಭದಲ್ಲಿ ಅವರ ಶಿಷ್ಯರೂ ಗೆಳೆಯರೂ ಲೇಖನಗಳನ್ನು ಬರೆದಂತಹವು. ಹೆಚ್ಚಿನವು ಅವರ ವ್ಯಕ್ತಿತ್ವವನ್ನು ವಿಶ್ಲೇಷಿಸುವಂತಹವು. ಅವರ ಸಾಹಿತ್ಯದ ವಿಮರ್ಶೆ ಮಾಡುವಂತಹವಲ್ಲ.
೧. "ಸಣ್ಣಗುಡ್ಡಯ್ಯ : ಸದಭಿರುಚಿಯ ಸಂಕೇತ" ಈ ಲೇಖನವನ್ನು ಬರೆದವರು ಪ್ರೊ. ಬರಗೂರು ರಾಮಚಂದ್ರನವರು. ಅವರು ತಮ್ಮ ಲೇಖನದಲ್ಲಿ ಹೇಳಿರುವ ಕೆಲವು ಮುಖ್ಯ ಅಂಶಗಳಿವು.

ಅ. ಸಣ್ಣಗುಡ್ಡಯ್ಯನವರ ವ್ಯಕ್ತಿ ಶುದ್ಧತೆ ಮತ್ತು ಚಿಂತನಾ ಶುದ್ಧತೆ.

ಆ. ಎಲೆ ಮರೆ ಕಾಯಿಯಂತೆ ಜೀವನ ನಡೆಸಿದ್ದು.

ಇ. ಆತ್ಮವಂಚನೆ ಮಾಡಿಕೊಳ್ಳದ ವ್ಯಕ್ತಿತ್ವ ಹೊಂದಿದ್ದು.

ಈ. ತಾವಿದ್ದ ಕಡೆ ಸಾಹಿತ್ಯ ಪರಿಸರವೊಂದನ್ನು ನಿರ್ಮಾಣ ಮಾಡುವುದು.

ಬರಗೂರು ರಾಮಚಂದ್ರಪ್ಪ ಅವರ ಅಭಿಪ್ರಾಯಗಳನ್ನು ನೋಡಿದಾಗ ಸಣ್ಣಗುಡ್ಡಯ್ಯನವರ ಚಿಂತನೆಗಳು ಸ್ವಕೇಂದ್ರಿತ ಜೀವನ ವಿಧಾನ ಬೆಳೆಯುತ್ತಿರುವ ಇಂದಿನ ಸಂದರ್ಭದಲ್ಲಿ ಹೆಚ್ಚು ಮಹತ್ವವೆನಿಸುತ್ತವೆ. ಸಣ್ಣಗುಡ್ಡಯ್ಯ ಅವರ ವ್ಯಕ್ತಿತ್ವ ಪಕ್ವವಾಗಿರುವಂತೆ ಅವರ ಚಿಂತನೆಗಳೂ

ಪರಿಪಕ್ವವಾಗಿವೆ. ಆಡಂಬರ ಜೀವನವೇ ಮುಖ್ಯವಾಗಿರುವ ಇಂದು ಗ್ರಾಮೀಣ ಜೀವನವನ್ನು ಅವಲಂಬಿಸುವವರು ಯಾರು ಇಲ್ಲ ಎಂಬ ಚಿಂತನೆ ಬರಗೂರರ ಲೇಖನದಲ್ಲಿ ಧ್ವನಿಸುತ್ತದೆ.

ಶ್ರೀಯುತರು ಅಧ್ಯಾಪಕರಾಗಿ ಗಳಿಸಿದ ಅಪಾರ ಶಿಷ್ಯವರ್ಗ, ಎಲ್ಲರೊಂದಿಗೂ ಆದರ್ಶಯುತವಾಗಿ ನಡೆಯುವ ರೀತಿ ಇವೆಲ್ಲವೂ ವ್ಯಕ್ತಿ ಶುದ್ಧತೆಯನ್ನು ಎತ್ತಿ ತೋರಿಸುತ್ತವೆ. ಯಾವುದೇ ವಿಷಯದಲ್ಲೂ ಹಿಂದೆ ಬೀಳದಂಥ ವ್ಯಕ್ತಿತ್ವದವರು. ಸರಳ ಮಾತುಗಳಿಂದ ಶಿಷ್ಯರನ್ನು ಸೆಳೆಯುವ ಮಾಂತ್ರಿಕ ಶಕ್ತಿ ಸಣ್ಣಗುಡ್ಡಯ್ಯನವರಲ್ಲಿ ಇರುವುದನ್ನು ಗಮನಿಸಬಹುದು. ವಿಮರ್ಶಕರು ಈ ಲೇಖನದಲ್ಲಿ 'ಎಲೆ ಮರೆ ಕಾಯಿಯಂತೆ' ಎಂಬ ಉಪಮೇಯ ರೂಪಕವನ್ನು ಕೊಟ್ಟಿರುವುದನ್ನು ಗಮನಿಸಿದಾಗ ಸಣ್ಣ ಗುಡ್ಡಯ್ಯನವರ ಸರಳ ವ್ಯಕ್ತಿತ್ವ ತಿಳಿಯುತ್ತದೆ.

ಸಾಹಿತ್ಯ ವಲಯದಲ್ಲಿ ರಾಜಕೀಯ ತುಂಬಿರುವುದರಿಂದ ಯಾವುದಾದರೂ ಪ್ರಶಸ್ತಿಗೆ ಪಾತ್ರರಾದವರು ಉತ್ತಮ ಲೇಖಕರು ಎಂಬ ಭ್ರಮೆ ತುಂಬಿರುವ ಈ ಸಾಹಿತ್ಯವಲಯದಲ್ಲಿ ಇಂಥ ಎಲೆ ಮರೆ ಕಾಯಿಗಳು ಸಾಹಿತ್ಯವಲಯದಲ್ಲಿ ಇದ್ದರೂ ಗುರುತಿಸುವಂಥ ಕೆಲಸ ನಡೆದಿಲ್ಲ ಎಂಬುದು ಬರಗೂರರ ಮಾತಿನಲ್ಲಿ ಸ್ಪಷ್ಟವಾಗುತ್ತದೆ.

ಅವರಿದ್ದ ಕಡೆ ಸಾಹಿತ್ಯ ಪರಿಸರವೊಂದು ನಿರ್ಮಾಣವಾಗುತ್ತದೆ ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ. ಆದರೂ ಈ ಲೇಖನದಲ್ಲಿ ಸಣ್ಣಗುಡ್ಡಯ್ಯನವರ ಬಗ್ಗೆ ಮರುಕವಿದೆ. ಯಾರೇ ಗುರುತಿಸಲಿ ಇಲ್ಲವೇ ಬಿಡಲಿ ತನ್ನ ಕಾರ್ಯ ತನಗೆ ತೋಚಿದಷ್ಟು ಮಾಡುವ ಪ್ರಾಂಜಲ ಮನಸ್ಸಿನವರು. ಇವರ ಮೂಲಕ ಬೆಳೆದು ಬಂದ ಅನೇಕರು ಇವರಿಗಿಂತಲೂ 'ಜನಪ್ರಸಿದ್ಧಿ' 'ಮಾಧ್ಯಮ ಪ್ರಸಿದ್ಧಿ'ಯಾದವರು. ಇವರು ಮಾತ್ರ ಪ್ರಾಧ್ಯಾಪಕರಾಗಿ ಇದ್ದುಕೊಂಡೇ ಕ್ರಿಯಾಶೀಲತೆಯನ್ನು ಬೆಳೆಸಿದರು. ಬರಗೂರರು "ಅವರಿದ್ದ ಕಡೆ ಸಾಹಿತ್ಯ ಪರಿಸರವೊಂದು ಅವರಿಸಿಕೊಳ್ಳುತ್ತದೆ" ಎಂದು ಹೇಳುವ ಮಾತುಗಳು ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದ ಮಹತ್ವವನ್ನು ಸೂಚಿಸುತ್ತವೆ.

ಸಣ್ಣ ಗುಡ್ಡಯ್ಯನವರನ್ನು ಬರಗೂರು ರಾಮಚಂದ್ರಪ್ಪನವರು "ಅರೆಬೆಳಕಿನ ಬಿಂಬಗಳು" ಎಂದಿರುವುದು ಸಮಂಜಸವಾದುದಾಗಿದೆ. ಸಣ್ಣಗುಡ್ಡಯ್ಯನವರು ಪ್ರಶಸ್ತಿಗಾಗಿ ಬರೆದವರಲ್ಲ. ಸಾಹಿತ್ಯದ ಜೊತೆ ಒಂದು ಪರಿಸರವನ್ನು ನಿರ್ಮಾಣ ಮಾಡಿ ಶಿಷ್ಯವರ್ಗವನ್ನು ಹೆಚ್ಚಿಸಿಕೊಂಡಂಥವರು. ಅವರಿಗೆ ಶಿಷ್ಯರು ಕೊಡುವ ಪ್ರಶಸ್ತಿಗಿಂತ ಸರ್ಕಾರ ಕೊಡುವ ಪ್ರಶಸ್ತಿಯಲ್ಲಿ ಕಿಂಚಿತ್ತೂ ಆಸಕ್ತಿಯಿರಲಿಲ್ಲವೆನ್ನಬಹುದು. ಅವರು ಸಾಹಿತ್ಯ ವಲಯದಲ್ಲಿ ಚಿರಪರಿಚಿತರಾಗಿ ಶಿಷ್ಯ ವೃಂದದಲ್ಲಿ ತೃಪ್ತಿಪಟ್ಟವರು. ಇಂಥ ತೃಪ್ತಿ ಒಟ್ಟಾರೆಯಾಗಿ ಬರಗೂರರ ಲೇಖನವು ವ್ಯಕ್ತಿಯನ್ನು ಸೂಕ್ಷ್ಮವಾಗಲ್ಲದಿದ್ದರೂ ಸರಳ ರೀತಿಯಲ್ಲಿ ಪರಿಚಯಿಸುತ್ತದೆ.

ಬರಗೂರು ಲೇಖನದಲ್ಲಿ ತಾನು ಪ್ರೀತಿಸುವ ವ್ಯಕ್ತಿಯ ಜೀವನವನ್ನು ಆದರಿಂದ ಪರಿಚಯಿಸುವ ಧೋರಣೆಯ ಕಾಣುತ್ತೇವೆ. ಆದರೆ ಈ ಲೇಖನವನ್ನು ಓದಿದ ಮೇಲೆ ಇದು ಅವರ ಸಾಹಿತ್ಯದ ಚರ್ಚೆಯನ್ನು ಒಳಗೊಂಡಿಲ್ಲ. ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದ ಬಗ್ಗೆ ಆದರ ಮೂಡುತ್ತದೆ. ಅವರ ಸಾಹಿತ್ಯವನ್ನು ಅಧ್ಯಯನ ಮಾಡಬೇಕೆಂಬ ಹಂಬಲ ಉಂಟಾಗುವುದಿಲ್ಲ. ಅಷ್ಟರ ಮಟ್ಟಿಗೆ ಲೇಖನ ನೀರಸವಾಗಿದೆ.

೨. "ಎಚ್.ಜಿ. ಸಣ್ಣಗುಡ್ಡಯ್ಯ : ಶ್ರಮ ಸಂಸ್ಕೃತಿ-ಗ್ರಾಮೀಣ ಸೊಗಡಿನ ಲೇಖಕ" ಎಂಬ ಈ ಲೇಖನವನ್ನು ಬರೆದವರು ಸೋ.ಮು. ಭಾಸ್ಕರಾಚಾರ್‌ರವರು. ಅವರು ತಮ್ಮ ಈ ಲೇಖನದಲ್ಲಿ ಹೇಳಿರುವ ಮುಖ್ಯ ಸಂಗತಿಗಳಿವು.

ಅ. ಸಣ್ಣಗುಡ್ಡಯ್ಯನವರು ಸ್ನೇಹಪರತೆ, ಸರಳತೆ ಹಾಗೂ ಚಿಂತನಶೀಲತೆಗೆ ನಿದರ್ಶನ ವಾಗಿದ್ದವರು.

ಆ. ಬಾಲ್ಯದಲ್ಲಿ ಕೂಲಿ-ಕಾರ್ಮಿಕರ ಕಠಿಣ ಜೀವನವನ್ನು ಕಂಡವರು.

ಇ. ತೀ.ನಂ.ಶ್ರೀ. ಡಿ.ಎಲ್.ಎನ್.ರವರ ಪ್ರಭಾವಕ್ಕೆ ಒಳಗಾದವರು.

ಈ. ಮಾರ್ಕ್ಸ್‌ವಾದದಲ್ಲಿ ನಂಬಿಕೆ ಇಟ್ಟಂಥವರು.

ಸೋ.ಮು.ಭಾಸ್ಕರಾಚಾರ್ ಅವರು ಹೇಳುವಂತೆ - ಅಪ್ಪಟ ಗ್ರಾಮೀಣ ಭಾಗದಿಂದ ಬಂದಂಥ ಸಣ್ಣಗುಡ್ಡಯ್ಯನವರು ಸ್ನೇಹಪರತೆ ಮತ್ತು ಸರಳತೆಗೆ ಒತ್ತು ಕೊಟ್ಟಂಥವರು. ಬಾಲ್ಯದಲ್ಲೇ ಬಡತನದ ಕಷ್ಟವನ್ನು ಅರಿತಿದ್ದವರು. ಕೂಲಿ ಮಠದಲ್ಲಿ ವಿದ್ಯಾಭ್ಯಾಸ ಮಾಡಿ, ತನ್ನ ಸುತ್ತಲಿನ ಪರಿಸರದ ಆಗು-ಹೋಗುಗಳನ್ನು ಕಣ್ಣಾರೆ ಕಂಡಿದ್ದವರು. ಗ್ರಾಮೀಣ ಜನರ ಬದುಕಿನ ಒಡಲಾಳದ ವೇದನೆಯನ್ನು ಚೆನ್ನಾಗಿ ಬಲ್ಲವರಾಗಿದ್ದವರು. ವಿದ್ಯಾರ್ಥಿ ದೆಸೆಯಲ್ಲೇ ಅವರು ಮೈಸೂರು, ತುಮಕೂರು ನಗರಗಳಲ್ಲೂ ಇದ್ದು ಕೂಲಿ ಕಾರ್ಮಿಕರ ಕಠಿಣ ಜೀವನ ಕಂಡವರು. ಇಂಥ ಸಂದರ್ಭದಲ್ಲೇ ಸಮಾಜವಾದಿ ರಾಷ್ಟ್ರಗಳ ಪ್ರಗತಿಪರ ಲೇಖಕರುಗಳ ಗ್ರಂಥಗಳನ್ನು ಓದಿ ಆ ಮೂಲಕ ಮಾರ್ಕ್ಸ್‌ವಾದಿ ವಿಚಾರಗಳ ಗಾಢ ಪ್ರಭಾವಕ್ಕೆ ಒಳಗಾದವರು. ಈ ಎಲ್ಲ ಸಾಹಿತಿಗಳು ಅವರ ಜೀವನಪರ, ಸಮಾಜಪರ ಚಿಂತನೆಗಳು ರೂಪುಗೊಳ್ಳಲು ಪ್ರೇರಕವಾದವು.

ತೀ.ನಂ.ಶ್ರೀ ಮತ್ತು ಡಿ.ಎಲ್.ಎನ್.ರವರ ಪ್ರಭಾವ ವಲಯದಲ್ಲಿ ಮಿಂದು ಬಂದ ಇವರು ಗುರುಗಳ ಆದರ್ಶವನ್ನು ಯಥಾವತ್ತಾಗಿ ಕರಗತ ಮಾಡಿಕೊಂಡಂಥವರು. ಇಂಥ ಒಂದು ಸಾಹಿತ್ಯ ವಲಯದಲ್ಲಿ ಇದ್ದುದರಿಂದಲೇ ಅವರು ಪ್ರಾಧ್ಯಾಪಕರಾಗಿಯೂ, ಸಾಹಿತ್ಯ ವಲಯದಲ್ಲಿ ಕೃಷಿ ಮಾಡುವಂತಹ ಲೇಖಕರಾಗಿಯೂ ಬೆಳೆಯಲು ಸಾಧ್ಯವಾಯಿತು. ಸಣ್ಣಗುಡ್ಡಯ್ಯನವರು ಉತ್ತಮ ಪ್ರಾಧ್ಯಾಪಕರಾಗಿ ಶಿಷ್ಯ

ವರ್ಗದಲ್ಲಿ ಅಪಾರ ಪ್ರೀತಿಯನ್ನು ಧಾರೆಯೆರೆದಂಥವರು. ದೃಢ ನಿಲುವು, ಬೋಧನೆ ಕೇವಲ ಪರೀಕ್ಷೆ ಎದುರಿಸುವುದಲ್ಲ ಬದುಕನ್ನು ರೂಢಿಸಿಕೊಳ್ಳುವುದಕ್ಕೆ ಎಂದು ನಂಬಿದ್ದ ಸಣ್ಣಗುಡ್ಡಯ್ಯನವರು ಕ್ರಿಯಾಶೀಲ ಸಾಹಿತಿಯಾಗಿ, ಪ್ರಾಧ್ಯಾಪಕರಾಗಿ ಕಾಣುತ್ತಾರೆ. ನೇರ ನುಡಿಯ ಸ್ನೇಹ ಮತ್ತು ಸರಳತೆಯು ಸಣ್ಣಗುಡ್ಡಯ್ಯನವರಲ್ಲಿ ಸದಾ ಇದ್ದುದ್ದರಿಂದಲೇ ಅವರು ಪ್ರಗತಿಪರ ಚಿಂತನೆಗಳು ವಿದ್ಯಾರ್ಥಿಗಳಲ್ಲಿ ಮೂಡುವಂತೆ ಮಾಡಿದವರು. ಹಾಗೆಯೇ ವಿದ್ಯಾರ್ಥಿಗಳ ಮನಸ್ಸುಗೆಲ್ಲುವ, ಭಾವಿ ಪ್ರಜೆಗಳನ್ನು ರೂಪಿಸಬೇಕೆಂಬ ತಹತಹಿಕೆಯ ಶ್ರಮಶೀಲಗುಣದಿಂದ ಪ್ರಭಾವ ಬೀರಿದವರು ಎಂಬುದು ಸೋ.ಮು. ಭಾಸ್ಕರಾಚಾರ್ ರವರ ಲೇಖನದಲ್ಲಿ ಸ್ಪಷ್ಟವಾಗುತ್ತದೆ.

ಸೋ.ಮು. ಭಾಸ್ಕರಾಚಾರ್ ಅವರ ಲೇಖನದಲ್ಲಿ ಹೊಗಳಿಕೆಯ ಮಾತುಗಳೇ ಹೆಚ್ಚಾಗಿ ಕಂಡುಬರುತ್ತದೆ. ಗುರುಗಳಿಗೆ ಬರವಣಿಗೆಯ ರೂಪದಲ್ಲಿ ಶಿಷ್ಯರು ಸಲ್ಲಿಸುವ ಕೃತಜ್ಞತೆ ರೀತಿಯಲ್ಲಿ ಅವರ ಬರಹವಿದೆ. ಈ ಲೇಖನವನ್ನು ಗಮನಿಸಿದಾಗ ಸಣ್ಣ ಗುಡ್ಡಯ್ಯನವರ ವೈಭವೀಕೃತ ವ್ಯಕ್ತಿತ್ವವೇ ಗೋಚರಿಸುತ್ತದೆ. ಹೀಗಾಗಿ ಲೇಖನದಲ್ಲಿ ವಿಮರ್ಶಾತ್ಮಕ ಮಾತುಗಳು ಎಲ್ಲೂ ಬಂದಿಲ್ಲ. ಆದುದರಿಂದ ಈ ಲೇಖನ ಏಖಮುಖವಾಗಿರುವಂತೆ ಕಂಡುಬರುತ್ತದೆ. ಪರಿಚಯಾತ್ಮಕ ದೃಷ್ಟಿಯಲ್ಲಿ ಬರೆದಂತಹ ಲೇಖನವಾಗಿ ತಿಳಿಯುತ್ತದೆ. ಹೀಗಾಗಿ ಅದರಲ್ಲಿ ವಿಮರ್ಶಾತ್ಮಕತೆ ಎಲ್ಲೂ ಕಂಡುಬರುವುದಿಲ್ಲ. ಕೆಲವೊಂದು ವಿಮರ್ಶೆ ಮಾತುಗಳು ಈ ಲೇಖನದಲ್ಲಿ ಅಡಕವಾಗಿದ್ದರೆ ಹೆಚ್ಚು ಶಕ್ತಿ ಬರುತ್ತಿತ್ತು ಎಂದು ಅನಿಸುತ್ತದೆ. ಒಟ್ಟಿನಲ್ಲಿ ಸೋ.ಮು. ಭಾಸ್ಕರಾಚಾರ್ ಅವರು ಸಣ್ಣಗುಡ್ಡಯ್ಯನವರು ''ಶ್ರಮ, ಸಂಸ್ಕೃತಿ ಮತ್ತು ಗ್ರಾಮೀಣ ಸೊಗಡಿನ ಲೇಖಕ'' ಎಂದು ವರ್ಣಿಸಿರುವುದು ಉಚಿತವಾಗಿದೆ.

೩. ''ಹೃದಯವಂತ'' ಪ್ರೊ. ಎಚ್.ಜಿ. ಸಣ್ಣಗುಡ್ಡಯ್ಯ: ಆರ್. ಲಕ್ಷ್ಮೀನಾರಾಯಣ ಅವರು ಈ ಲೇಖನದ ಲೇಖಕರು ಅವರ ಪ್ರಕಾರ

ಅ. ಎಚ್.ಜಿ.ಸಣ್ಣಗುಡ್ಡಯ್ಯನವರು ನೇರ ನುಡಿಯ ಹರಿತವಾದ ವಿಚಾರವುಳ್ಳವರು.

ಆ. ಅವರು ಮಾನವೀಯ ಮನಸ್ಸಿನ ಹೃದಯವಂತರು.

ಇ. ನಂಬಿಕೆ ವಿಚಾರ ಮೌಲ್ಯಗಳಿಗೆ ಅವರು ರಾಜಿ ಮಾಡಿಕೊಂಡವರಲ್ಲ.

ಈ. ಸೋಮಾರಿತನ ಮತ್ತು ಅನಾರೋಗ್ಯಗಳ ಕಾರಣದಿಂದ ಅವರಿಗೆ ಹೆಚ್ಚು ಬರೆಯಲಾಗಲಿಲ್ಲ.

ಉ. ತೀ.ನಂ.ಶ್ರೀ.ಯವರೇ ಅವರಿಗೆ ಹೆಚ್ಚು ಆದರ್ಶವಾಗಿದ್ದರು.

ಈ ಲೇಖನವನ್ನು ಬರೆದ ಪ್ರೊ.ಲಕ್ಷ್ಮೀನಾರಾಯಣರವರು ಸಣ್ಣಗುಡ್ಡಯ್ಯನವರ ಗೆಳೆಯರು. ಅವರು ಗೆಳೆಯನೆಂಬ ಅಭಿಮಾನಕ್ಕೆ ಕಟ್ಟುಬಿದ್ದು 'ಹೃದಯ'ದಿಂದ ಬರೆದಂಥ ನಿಷ್ಕಲ್ಮಷ ಮಾತಿನ

ಲೇಖನವಿದು. ಈ ಲೇಖನದಲ್ಲಿ ಸಣ್ಣ ಗುಡ್ಡಯ್ಯನವರ ಕುರಿತು ಎಲ್ಲಿಯೂ ಅತಿಶಯೋಕ್ತಿಯಾದ ನುಡಿಗಳಾಗಲಿ, ಕಠೋರ ವಿಮರ್ಶೆಯಾಗಲಿ ಅಥವಾ ನಿಂದನೆ ಮಾತುಗಳಾಗಲಿ ಇಲ್ಲ.

ಪ್ರೊ.ಆರ್.ಲಕ್ಷ್ಮೀನಾರಾಯಣ ಅವರು ತಮ್ಮ ಲೇಖನದಲ್ಲಿ ಸಣ್ಣಗುಡ್ಡಯ್ಯನವರು ನೇರ ನುಡಿಯ ಹರಿತವಾದ ವಿಚಾರವುಳ್ಳವರು. ಹಾಗೂ ಮಾನವೀಯ ಮನಸ್ಸಿನವರು ಎನ್ನುತ್ತಾರೆ. ಈ ಮಾತುಗಳು ಸಣ್ಣಗುಡ್ಡಯ್ಯನವರ ಬರಹಗಳನ್ನು ಅಧ್ಯಯನ ಮಾಡುವ ಯಾರಿಗೂ ನಿಜವೆನಿಸುತ್ತದೆ. ಹಳೆ ತಲೆಮಾರಿನ ಲೇಖಕರಾದರೂ ಆದರ್ಶ ಪ್ರಭಾವಕ್ಕೆ ಒಳಗಾಗದೇ ಸಮಾಜದಲ್ಲಿ ಕಂಡಂಥ ಸಮಸ್ಯೆಗಳನ್ನು ತಮ್ಮ ಕಾವ್ಯದಲ್ಲಿ, ಪ್ರಬಂಧಗಳಲ್ಲಿ ಸೆರೆ ಹಿಡಿದಿದ್ದಾರೆ. ಅವರ ಚಿಂತನೆಗಳು ಪ್ರಶಸ್ತಿ ಮುಖಿಯಾಗದೆ, ವಿಚಾರಮುಖಿಯಾಗಿವೆ. ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದಲ್ಲಿದ್ದ ನೇರ, ನಿಷ್ಠುರತೆ ಅವರನ್ನು ಹರಿತ ವಿಚಾರವುಳ್ಳವರನ್ನಾಗಿ ಮಾಡಿರಬಹುದು. 'ಸಾಹಿತಿ' ಎನ್ನುವ ಕವಿತೆಯೊಂದರಲ್ಲಿ ಸಣ್ಣಗುಡ್ಡಯ್ಯನವರು ಸಾಹಿತಿಗಳ ಹೀನ ಬದುಕನ್ನು ಎತ್ತಿ ತೋರಿಸಿದ್ದಾರೆ. 'ರಾಷ್ಟ್ರಪಿತನಿಗೊಂದು ಕಿವಿ ಮಾತು' ಎನ್ನುವ ಕವಿತೆಯಲ್ಲಿ ಕೂಡ ಸಮಾಜ ನೈತಿಕ ಅಧಃಪತನಗೊಳ್ಳುತ್ತಿರುವುದನ್ನು ಯಾವುದೇ ರೂಪಕಗಳಲ್ಲಿ ಹಿಡಿಯದೆ ನೇರವಾಗಿ ಹೇಳಿದ್ದಾರೆ. ನಿಷ್ಠುರ ಸ್ವರೂಪವನ್ನು ಹೊಂದಿದ್ದರೂ ಅಷ್ಟೇ ಸ್ನೇಹ ಗುಣದಿಂದ ತುಮಕೂರಿನ ಭಾಗದಲ್ಲಿ ಸಣ್ಣಗುಡ್ಡಯ್ಯನವರು ನೂರಾರು ಶಿಷ್ಯರನ್ನು ಬೆಳೆಸಿದರು. ಹಾಗಂತ ತಮ್ಮ ಶಿಷ್ಯರ ಮೇಲೆ ಎಂದೂ ತಮ್ಮ ಪ್ರಭಾವ ಹೇರಲಿಲ್ಲ. ಬದಲು ವಿಚಾರಗಳ ವಿನಿಮಯ ಮಾಡಿಕೊಳ್ಳುತ್ತಿದ್ದರು ಅಷ್ಟೇ.

ಸಣ್ಣಗುಡ್ಡಯ್ಯನವರ ಶಿಷ್ಯರಾಗಿದ್ದ ಬರಗೂರು ರಾಮಚಂದ್ರಪ್ಪನವರು, ನಟರಾಜ್ ಬೂದಾಳ್ ರವರು, ಸೋ.ಮು.ಭಾಸ್ಕರಚಾರ್‌ರವರು ಹೇಳಿದ ಮಾತುಗಳನ್ನು ಲಕ್ಷ್ಮೀ ನಾರಾಯಣರ ಲೇಖನದಲ್ಲೂ ಕಾಣಬಹುದು. ಆದರೆ ಸಣ್ಣಗುಡ್ಡಯ್ಯನವರ ಸೋಮಾರಿತನ ಮತ್ತು ಅನಾರೋಗ್ಯಗಳ ಕಾರಣದಿಂದ ಅವರಿಗೆ ಹೆಚ್ಚು ಬರೆಯಲಾಗಲಿಲ್ಲ. ಕೆಲವೊಂದು ಕವಿತೆಗಳನ್ನು, ಪ್ರಬಂಧಗಳನ್ನು ತಿದ್ದಿ ಬರೆದಿದ್ದರೆ ಇನ್ನೂ ಚೆನ್ನಾಗಿ ಮೂಡಿಬರುತ್ತಿದ್ದವು. ಇವರ ಪ್ರಬಂಧಗಳಲ್ಲಿ ಲಾಲಿತ್ಯವನ್ನು ಕಂಡರೂ ವಿಚಾರದ ಭಾರಕ್ಕೆ ಒಳಗಾಗಿ ಬಿಡುತ್ತದೆ ಎಂಬ ಮಾತುಗಳನ್ನು ಲಕ್ಷ್ಮೀನಾರಾಯಣ ಹೇಳುತ್ತಾರೆ.

ಒಟ್ಟಿನಲ್ಲಿ ಲಕ್ಷ್ಮೀನಾರಾಯಣರ ಲೇಖನದಲ್ಲಿ ಮೂಡಿಬಂದಿರುವ ವಿಮರ್ಶಾತ್ಮಕ ಅನಿಸಿಕೆಗಳು ವಿಚಾರಾರ್ಹವಾಗಿವೆ.

**೪. ಪ್ರೊ. ಎಚ್.ಜಿ.ಸಣ್ಣಗುಡ್ಡಯ್ಯ-ಒಂದು ನೆನಪು :** ಈ ಲೇಖನದಲ್ಲಿ ಕವಿಗಳಾದ ಎಸ್. ನಟರಾಜ್ ಬೂದಾಳ್‌ರವರು ಈ ಕೆಳಕಂಡ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ.

ಅ. ಸಣ್ಣ ಗುಡ್ಡಯ್ಯನವರು ಜಾತ್ಯತೀತ ಸಾಂಸ್ಕೃತಿಕ ಪರಿಸರವನ್ನು ಬೆಳೆಸಿದವರು.

ಆ. ಲಲಿತ ಪ್ರಬಂಧಕಾರರೆಂದೇ ಸಾಹಿತ್ಯ ವಲಯದಲ್ಲಿ ಗುರುತಿಸಿಕೊಂಡವರು.

ಇ. ತೀ.ನಂ.ಶ್ರೀ.ಯವರ ಅಪ್ಪಟ ಶಿಷ್ಯರಾಗಿದ್ದವರು.

ಸಣ್ಣಗುಡ್ಡಯ್ಯನವರ ಶಿಷ್ಯರ ಬಳಗದಲ್ಲಿ ಒಬ್ಬರಾದ ನಟರಾಜ ಬೂದಾಳ್ ಅವರ ಈ ಲೇಖನದಲ್ಲಿ ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದ ಹಿರಿಮೆಯು ಮತ್ತೆಮತ್ತೆ ನೆನಪು ಮಾಡಿಕೊಳ್ಳುವಂತೆ ಮೂಡಿಬಂದಿದೆ. ಸಣ್ಣ ಗುಡ್ಡಯ್ಯನವರು 'ಜನತಾ ಪುಸ್ತಕಾಲಯ' ತೆರೆದಿದ್ದನ್ನು ಕೆ.ಆರ್.ನಾಯಕ್ ಹಾಗೂ ವೀಚಿಯವರ ಜತೆ ಕೂಡಿಕೊಂಡು ಸಾಂಸ್ಕೃತಿಕ ನಿರ್ಮಾಣ ಮಾಡಿದ್ದನ್ನು, ಯುವ ಬರಹಗಾರರಿಗೆ ಪ್ರೋತ್ಸಾಹ ನೀಡಿದ್ದನ್ನು ಈ ಲೇಖನ ನೆನಪು ಮಾಡಿಕೊಳ್ಳುತ್ತದೆ.

ಪ್ರತಿಯೋರ್ವ ಸಾಹಿತಿಗೂ, ತನ್ನದೇ ಆದ ವಿಚಾರದ ಮತ್ತು ಬರೆಹದ ವೈಶಿಷ್ಟ್ಯವಿರುತ್ತದೆ. ಇದರ ಜತೆಗೆ ಅವನದೇ ಆದ ಮಿತಿಗಳಿರುತ್ತವೆ. ಆದರೆ ಬೂದಾಳ್‌ರು 'ಮೇಷ್ಟ್ರು' ಮೇಲಿನ ತುಂಬು ಅಭಿಮಾನದಿಂದ ಬರೆದಿರುವುದರಿಂದ ಮಿತಿಗಳನ್ನು ಗುರುತಿಸಲು ಆಗಿಲ್ಲ. "ಎ.ಎನ್.ಮೂರ್ತಿರಾವ್ ರವರ ಅತ್ತೋ ಇತ್ತೋ ಎಂದು ವಾಲಾಡುತ್ತಿದ್ದ ಲಲಿತ ಪ್ರಬಂಧಗಳಿಗೆ ದೃಢವಾದ ಮತ್ತು ಹರಿತವಾದ ಸಾಮಾಜಿಕ ವಿಮರ್ಶೆಯನ್ನು ತಾಳಿಕೊಳ್ಳುವ ಗುಣವನ್ನು ಒದಗಿಸಿಕೊಟ್ಟವರು." ಎಂಬ ಮಾತು ಲೇಖನ ವನ್ನು ಹಿಗ್ಗಿಸಿದೆ ಹೊರತು ಅದರ ವಿಚಾರವನ್ನಲ್ಲ. ಎ.ಎನ್.ಮೂರ್ತಿರಾವ್ ರವರ ಪ್ರಬಂಧಗಳಲ್ಲಿ ಲಾಲಿತ್ಯವು ವಿಚಾರವನ್ನು ಮರೆಮಾಚಿದ್ದರೆ, ಸಣ್ಣಗುಡ್ಡಯ್ಯನವರ ಪ್ರಬಂಧದಗಳ 'ವಿಚಾರವು ಲಾಲಿತ್ಯವನ್ನು ಮರೆ ಮಾಡಿದೆ ಎಂಬ ಬೂದಾಳ್‌ರ ಮಾತು ಗಮನಾರ್ಹವಾಗಿದೆ.

ಬಡ ಜೀವನ ಪರಿಸರದಲ್ಲಿ ಹುಟ್ಟಿ ಮುಂದೆ ಬಂದಿದ್ದ ಸಣ್ಣಗುಡ್ಡಯ್ಯನವರು ಉತ್ತಮ ಸ್ಥಿತಿಗೇರಿದಾಗಲೂ ಗ್ರಾಮೀಣ ಪರಿಸರಕ್ಕೆ ವಿಮುಖರಾಗಿರಲಿಲ್ಲ. ಅವರ ಅನೇಕ ಪ್ರಬಂಧಗಳಲ್ಲಿ ನಗರ ಜೀವನಕ್ಕಿಂತ ಗ್ರಾಮೀಣ ಜೀವನ ಸಹಿಷ್ಣುಭಾವದಿಂದ ಕೂಡಿದೆಯೆಂದು ಬೂದಾಳ್ ನೆನಪಿಸಿಕೊಳ್ಳುತ್ತಾರೆ. ಬೂದಾಳ್ ಅವರಿಗೆ ತಮ್ಮ ಮೇಷ್ಟ್ರು ಎಡ ಪಂಥೀ ವಿಚಾರಗಳಿಂದ ಗಟ್ಟಿಕೊಂಡಿದ್ದರೂ, 'ಭಾರತೀಯ ಕಾವ್ಯ ಮೀಮಾಂಸೆಯನ್ನು' ಎಡಪಂಥೀಯ ವಿಚಾರದ ದೃಷ್ಟಿಕೋನದಿಂದ ನೋಡಲಿಲ್ಲವೆಂಬ ಅಸಮಾಧಾನವಿದೆ. ಸಹೃದಯ ಮನಸ್ಸಿನ ಸಣ್ಣಗುಡ್ಡಯ್ಯನವರು ತಮ್ಮ ಎಡಪಂಥೀಯ ವಿಚಾರದ ಮೂಲಕ ಭಾರತೀಯ ಕಾವ್ಯ ಮೀಮಾಂಸೆಯನ್ನು ಬೇರೆ ಬಗೆಯಲ್ಲಿ ನೋಡಬೇಕಾಗಿತ್ತು ಎಂಬ ಅಪೇಕ್ಷೆ ಸಹಜವಾಗಿದೆ.

ಈವರೆವಿಗೂ ಸಣ್ಣಗುಡ್ಡಯ್ಯನವರ ಕುರಿತ ಲೇಖನಗಳು ಹೆಚ್ಚಾಗಿ ಅವರ ಶಿಷ್ಯ ಬಳಗದಿಂದ ಮೂಡಿಬಂದಂತಹವು. ಇವುಗಳ ಸಾಮಾನ್ಯ ಲಕ್ಷಣ ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದ ಹಿರಿಮೆಯನ್ನು

ಎತ್ತಿ ಹಿಡಿಯುವುದು. ಅವರು ಸರಳ ಜೀವನ ಉದಾತ್ತ ಚಿಂತನೆ ಎಂಬ ಭಾವದಿಂದ ಬದುಕಿದವರು. ಸ್ನೇಹವೇ ಬೇರೆ, ವಿಚಾರವೇ ಬೇರೆ ಎಂದು ತಮಗೆ ದೋಷವೆಂದು ಕಂಡುಬಂದರೆ ನೇರವಾಗಿ ನಿಷ್ಠುರವಾಗಿ ವಿರೋಧಿಸುವ ವ್ಯಕ್ತಿತ್ವ ಭಾವದವರು ಎಂದೆಲ್ಲ ಇವು ಅವರ ಗುಣಗಾನ ಮಾಡುತ್ತವೆ. ಸಣ್ಣಗುಡ್ಡಯ್ಯನವರ ವ್ಯಕ್ತಿತ್ವ ಕುರಿತು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಮಾಹಿತಿಯನ್ನು ನೀಡುತ್ತವೆ. ಆದರೆ ಅವರ ಸಾಹಿತ್ಯ ಕುರಿತು ಕಡಿಮೆ ಚರ್ಚೆ ಮಾಡುತ್ತವೆ; ಅವರ ವ್ಯಕ್ತಿತ್ವದ ಮಿತಿಗಳನ್ನು ಗುರುತಿಸುವುದಿಲ್ಲ. ಒಬ್ಬ ವ್ಯಕ್ತಿಯ ಸಾವಿನನಂತರ ಮೂಡುವ ಲೇಖನಗಳಲ್ಲಿ ಈ ಬಗೆಯ ವಿಮರ್ಶಾತ್ಮಕ ವಿಶ್ಲೇಷಣೆ ಕಡಿಮೆ ಕೂಡ ಇರುತ್ತದೆ.

**ಕೊನೆ ಟಿಪ್ಪಣಿ**

೧. ಎಸ್.ನಟರಾಜ್ ಬೂದಾಳು, ಎಚ್.ಜಿ. ಸಣ್ಣಗುಡ್ಡಯ್ಯ: ಒಂದು ನೆನಪು, ೬ನೇ ಸೆಪ್ಟೆಂಬರ್, ೨೦೦೭

೨. ಬರಗೂರು ರಾಮಚಂದ್ರಪ್ಪ, ಶಬ್ದವಿಲ್ಲದ ಯುದ್ಧ, ಪು.೧೫೩

೩. ಅದೇ, ಪು.೧೫೫

# ಅಧ್ಯಾಯ ೨

## ಎಚ್.ಜಿ.ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳ ಸ್ವರೂಪ

## ೨

# ಎಚ್.ಜಿ.ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳ ಸ್ವರೂಪ

### ೨.೧. ಪೀಠಿಕೆ

ಲಲಿತಪ್ರಬಂಧ ಹೊಸಗನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ. ಕಥೆ, ಕಾದಂಬರಿ ರೂಪುಗೊಂಡಂತೆ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದ ಕನ್ನಡ ಗದ್ಯ ಸಾಹಿತ್ಯದಲ್ಲಿ ಆಕಾರಗೊಂಡ ಪ್ರಕಾರವಿದು. ಅತ್ಯಂತ ಲವಲವಿಕೆಯ ಈ ಪ್ರಕಾರ ನವೋದಯದ ಮಹತ್ವದ ಲೇಖಕರಿಂದ ಅರ್ಥಪೂರ್ಣವಾಗಿ ಬೆಳೆದುಬಂದಿತು.

'ಪ್ರಬಂಧದ ಸ್ವರೂಪ ಲಕ್ಷಣಗಳು ಸಾಹಿತ್ಯ ವಿಮರ್ಶೆಯ ಶಾಸ್ತ್ರದಲ್ಲಿ ನಿಖರವಾಗಿ ನಿರೂಪಿತವಾಗಿಲ್ಲ ವೆಂದೇ ಹೇಳಬಹುದು. ಅಪೂರ್ಣತೆಯೇ ಅದರ ಒಂದು ಲಕ್ಷಣವೂ ಹೌದು. ಬಹುಜನ ಪ್ರಬಂಧಕಾರರು ಜಾಣರು, ಲೋಕಾನುಭವವುಳ್ಳವರು ಮತ್ತು ವಾಗ್ಮಿಗಳು. ವಾಗ್ಮಿತೆ ಮತ್ತು ಪ್ರಬಂಧದ ಬರವಣಿಗೆಯಲ್ಲಿರುವ ಒಂದು ಸಾಮ್ಯವನ್ನು ತೋರಿಸುತ್ತಾ ಅದು ಅರ್ಥವನ್ನು ಪ್ರಕಟಿಸಿದೆ. ಅರ್ಥವನ್ನು ಸೃಷ್ಟಿಸುತ್ತಾ ಹೋಗುವ ಸಾಮರ್ಥ್ಯ' ಎಂದು ಕನ್ನಡದ ಪ್ರಸಿದ್ಧ ವಿಮರ್ಶಕ ಕೀರ್ತಿನಾಥ ಕುರ್ತಕೋಟಿಯವರು ಹೇಳುತ್ತಾರೆ. ಕನ್ನಡದ ಕೆಲವು ಪ್ರಬಂಧ ಸಂಕಲನಗಳ ಹೆಸರುಗಳೇ ಪ್ರಬಂಧದ ಸ್ವರೂಪ ಲಕ್ಷಣಗಳನ್ನು ನಿರೂಪಿಸುವಂತೆ ಕಾಣುತ್ತವೆ. 'ಹಗಲು ಗನಸುಗಳು', 'ಅಲೆಯುವ ಮನ', 'ಮಿನುಗು ಮಿಂಚು', 'ಮುತ್ತು ಹವಳ', 'ಗಾಳಿಪಟ', 'ಸಾವಧಾನ', 'ವಕ್ರದೃಷ್ಟಿ' ಇವು ಅಂಥ ಕೆಲವು ಹೆಸರುಗಳು.

ತಾತ್ಪರ್ಯವಾಗಿ ಪ್ರಬಂಧದ ಗುಣಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಬಹುಮಟ್ಟಿಗೆ ಸರಳವಾದ ಭಾಷೆಯಿಂದ ಕೂಡಿದ, ವ್ಯಕ್ತಿ ವಿಶಿಷ್ಟವಾದ ಓದುಗರನ್ನು ಒಲಿಸಿಕೊಳ್ಳುವ ಶೈಲಿ

೨. ನವಿರಾದ ಹಾಸ್ಯ

೩. ಬಹುಶ್ರುತತ್ವ ಮತ್ತು ಲೋಕಾನುಭವಗಳು ಬೆರೆತ ಸಮದೃಷ್ಟಿ

೪. ಹೇಳುವ ವಿಧಾನದಲ್ಲಿ ಕಂಡುಬರುವ ಲಾಘವ ಮತ್ತು ಸ್ವಚ್ಛಂದತೆ

ಕುವೆಂಪು, ಬೇಂದ್ರೆ, ವಿ.ಸೀ, ಮೊದಲಾದ ಕವಿಗಳು ನಾ.ಕಸ್ತೂರಿ ಶ್ರೀರಂಗ, ಎ.ಎನ್. ಮೂರ್ತಿ ರಾವ್, ಶಿವರಾಮ ಕಾರಂತರಂಥ ವಿಚಾರವಾದಿ ಗದ್ಯ ಲೇಖಕರು ಈ ಕಡೆಗೂ ಗಮನ ಹರಿಸಿದ್ದರಿಂದ

'ಲಲಿತ ಪ್ರಬಂಧ'ವು ಕನ್ನಡ ನೆಲದಲ್ಲಿ ಹುಲುಸಾಗಿ ಬೆಳೆಯಿತು. ಸುಮಾರು ಎಂಟು ದಶಕಗಳ ಇತಿಹಾಸ ಹೊಂದಿದ ಈ ಪ್ರಕಾರ ನವೋದಯ, ಪ್ರಗತಿಶೀಲ ನವ್ಯ, ದಲಿತ, ಬಂಡಾಯ ತಿರುವುಗಳಲ್ಲಿಯೂ ತನ್ನದೇ ಆದ ಭಾವಗೀತದ ಸೊಗಸನ್ನು ಮತ್ತು ಸಣ್ಣ ಕಥೆಯ ಕಥನವನ್ನು ಒಳಗೊಂಡು ನವುರಾದ ವಿನೋದದೊಂದಿಗೆ ಅಗತ್ಯಬಿದ್ದಾಗ, ಚುರುಕಾದ ವಿಡಂಬನೆಯೊಂದಿಗೆ ಬದುಕಿನ ಹಲವು ಮಗ್ಗಲುಗಳನ್ನು ಚಿತ್ರಿಸಿತು.

ಕನ್ನಡದಲ್ಲಿ ಪ್ರೊ.ಎ.ಎನ್ .ಮೂರ್ತಿರಾವ್ , ಗೊರೂರು ರಾಮಸ್ವಾಮಿ ಅಯ್ಯಂಗಾರ್ , ತೀ.ನಂ.ಶ್ರೀ, ಪು.ತಿ.ನ ಮುಂತಾದವರ ಸಾಲಿನಲ್ಲಿ ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳು ಸೇರುತ್ತವೆ. ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧ ಸಂಕಲನಗಳಾದ 'ಹದ್ದು ಮತ್ತು ಇತರ ಪ್ರಬಂಧಗಳು'' ''ಏಕಾಂತ ಮತ್ತು ಇತರ ಪ್ರಬಂಧ' ಇದನ್ನು ಇಟ್ಟುಕೊಂಡು ವಿವಿಧ ಆಯಾಮಗಳಿಂದ ಪರಿಶೀಲನೆ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ. ಸಣ್ಣಗುಡ್ಡಯ್ಯನವರ ಪ್ರಬಂಧಗಳು ಮಾನವ ಸಂಬಂಧಗಳ ಜೀವಂತಿಕೆಯಿಂದ ಕೂಡಿದ್ದು ಓದುಗರಲ್ಲಿ ಲವಲವಿಕೆಯನ್ನುಂಟು ಮಾಡುತ್ತವೆ. ಬಹುಮಟ್ಟಿಗೆ, ಸರಳವಾದ, ಭಾಷೆಯಿಂದ ಕೂಡಿದ ವ್ಯಕ್ತಿ ವಿಶಿಷ್ಟವಾದ ಹಾಗೂ ಓದುಗರನ್ನು ಒಲಿಸಿಕೊಳ್ಳುವ ಶೈಲಿ ಅವರ ಪ್ರಬಂಧಗಳಲ್ಲಿ ಇರುವುದನ್ನು ನೋಡಬಹುದು. ನವುರಾದ ವಿನೋದವನ್ನೂ ಲೋಕಾನುಭವಗಳನ್ನು ಬೆರೆತ ಸಮದೃಷ್ಟಿಯನ್ನೂ ಇವರ ಪ್ರಬಂಧಗಳಲ್ಲಿ ಕಾಣುತ್ತೇವೆ.

ಸಣ್ಣಗುಡ್ಡಯ್ಯನವರ ಪ್ರಬಂಧಗಳ ವಿಧಾನದಲ್ಲಿ ಕಂಡುಬರುವ ಸ್ವಚ್ಛಂದತೆ ಬಹಳ ಮುಖ್ಯವಾದುದು. ಮನಸ್ಸನ್ನು ಸ್ವಚ್ಛಂದವಾಗಿ ಹರಿಯಬಿಟ್ಟು ಓದುಗನೊಂದಿಗೆ ಆತ್ಮೀಯ ಸಂವಾದ ನಡೆಸುತ್ತಾ ಅವು ಸಾಗುತ್ತವೆ. ಲೇಖಕರ ಅನುಭವಗಳು, ಲೋಕದ ವಿಷಯಕ್ಕೆ ಅವರ ಪ್ರತಿಕ್ರಿಯೆಗಳು ನೇರವಾಗಿ ಅಭಿವ್ಯಕ್ತಿ ಪಡೆದುಕೊಳ್ಳುತ್ತಾ ಹೋಗುವುದನ್ನು ನೋಡಬಹುದು. ಅವರ ಎಲ್ಲಾ ಪ್ರಬಂಧಗಳ ಸಮಾನ ಅಂಶವೆಂದರೆ ಅತ್ಯಂತ ಗಹನವಾದ ವಿಚಾರಗಳನ್ನು ತೊಡಕುಗೊಳಿಸದೆ, ಭಾರವಾಗದಂತೆ ಆಪ್ತವಾಗಿ ಸಹೃದಯರ ಮನಮುಟ್ಟುವುದು. ಸಣ್ಣಗುಡ್ಡಯ್ಯನವರ ಪ್ರಬಂಧಗಳಲ್ಲಿ ತೀವ್ರ ವಿಶ್ಲೇಷಣೆಯೊಂದಿಗೆ ಹರಿತ ವಿಡಂಬನೆಯೂ ಸೇರಿದೆ. ಇವರ ಪ್ರಬಂಧಗಳು ಭಾವಗೀತೆಯ ದಾಟಿಯಲ್ಲಿರುವುದನ್ನು ನೋಡುತ್ತೇವೆ. ಎಸ್. ದಿವಾಕರ್‌ರವರು ಸಣ್ಣಗುಡ್ಡಯ್ಯ ಅವರ ಪ್ರಬಂಧಗಳ ಮೇಲೆ ನೀಡಿರುವ ಒಂದು ಅಭಿಪ್ರಾಯವು ಇಲ್ಲಿ ಉಲ್ಲೇಖಾರ್ಹವಾಗಿದೆ.

''ಬಿರು ಬೇಸಿಗೆಯ ಸಂಜೆ ಇದ್ದಕ್ಕಿದ್ದಂತೆ ಸುಳಿದು ಬರುವ ತಂಗಾಳಿಯಂತೆ ಮೈ ಮನಸ್ಸುಗಳಿಗೆ ಆಹ್ಲಾದ ಉಂಟು ಮಾಡುವ ಮೋಹಕ ಶಕ್ತಿ ನಿಮ್ಮ ಪ್ರಬಂಧಗಳಿಗಿದೆ....''[೧] ಬದುಕಿನ ವಿಕಾರಗಳಲ್ಲೂ ಸೌಂದರ್ಯವನ್ನು ಕಾಣಿಸಬಲ್ಲ ಪ್ರತಿಭೆ, ಮುಗ್ಧತೆಯನ್ನು ಉಳಿಸಿಕೊಂಡೂ ಸಾರಾಸಾರ ವಿಚಾರ ಮಾಡಬಲ್ಲ ಚಿಂತನಪರತೆ, ಕಗ್ಗಂಟುಗಳನ್ನು ನಯವಾಗಿ ಬಿಡಿಸುತ್ತಿರುವಾಗಲೇ ಬದುಕಿನ ಸಾಮರಸ್ಯವನ್ನು

ಮಿಂಚಿಸುವ ಕಲಾಪ್ರಜ್ಞೆ, ಉಪದೇಶಕ್ಕೆಳಸದ ವಿನಯ, ಪ್ರತಿಯೊಂದು ವಿಷಯಕ್ಕೂ ಪ್ರಾಣಾಧಾರವಾಗಬಲ್ಲ ಒಳನೋಟಗಳು, ಇವುಗಳಿಂದಾಗಿ ನಿಮ್ಮ ಪ್ರಬಂಧಗಳಿಗೆ ಕಾಂತಿ ಲಭಿಸಿದೆ... ಶ್ರೀ.ಎ.ಎನ್ .ಮೂರ್ತಿರಾಯರ ಪ್ರಬಂಧಗಳಲ್ಲಿರುವ ಲಾಲಿತ್ಯವೇ ಎದ್ದು ಕಂಡಿದೆ''. ಇಲ್ಲಿ ದಿವಾಕರ್ ಅವರು ಸಣ್ಣಗುಡ್ಡಯ್ಯನವರ ಪ್ರಬಂಧಗಳ ಮುಖ್ಯ ಲಕ್ಷಣಗಳನ್ನು ಮಾತ್ರವಲ್ಲದೆ, ಅವುಗಳ ಕಲಾವಂತಿಕೆಯನ್ನು ಕುರಿತು ಸಹ ಹೇಳಿದ್ದಾರೆ.

## ೨.೨. ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ಚಿಂತನ ಶೀಲತೆ

ಕನ್ನಡದ ಲಲಿತ ಪ್ರಬಂಧಗಳನ್ನು ಸ್ಥೂಲವಾಗಿ ಎರಡು ವಿಧವಾಗಿ ವಿಂಗಡಿಸಬಹುದು.

೧. ವಿನೋದ ಪ್ರಧಾನವಾದ ಲಲಿತ ಪ್ರಬಂಧಗಳು

೨. ಚಿಂತನ ಪ್ರಧಾನವಾದ ಲಲಿತ ಪ್ರಬಂಧಗಳು

ಈ ವಿಭಜನೆ ಬರಹಗಾರರ ವ್ಯಕ್ತಿತ್ವವನ್ನೂ ಅವಲಂಬಿಸಿರುತ್ತದೆ ಎಂದು ಹೇಳಬಹುದು. ಪ್ರೊ.ವೀರೇಂದ್ರ ಸಿಂಪಿಯವರು ಈ ವಿಭಜನೆಯ ಮೂಲಕ ಕನ್ನಡ ಪ್ರಬಂಧಕಾರರನ್ನು ವಿಶ್ಲೇಷಿಸಿರುವರು. ವಿನೋದ ಪ್ರಧಾನ ಪ್ರಬಂಧಗಳು ಹರಟೆಗಳಾಗಿ ಪರಿಣಮಿಸುತ್ತಿದ್ದರೆ, ಚಿಂತನಾ ಪ್ರಬಂಧಗಳು ನಿಜವಾದ ಅರ್ಥದಲ್ಲಿ ಲಲಿತಪ್ರಬಂಧಗಳಾಗಿ ನಿಲ್ಲುತ್ತವೆ. ವಿನೋಧ ಪ್ರಧಾನ ಪ್ರಬಂಧಕಾರರಲ್ಲಿ ನಾ.ಕಸ್ತೂರಿ, ಬೇಂದ್ರೆ, ಬೀಚಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಪ್ರಮುಖರಾಗುತ್ತಾರೆ. ಚಿಂತನಾ ಪ್ರಧಾನ ಪ್ರಬಂಧಕಾರರಲ್ಲಿ ಎ.ಎನ್.ಮೂರ್ತಿರಾವ್ , ರಾ.ಕು., ವಿ.ಸೀ., ಪು.ತಿ.ನ. ಎದ್ದು ಕಾಣುತ್ತಾರೆ. ಇಂಥ ಚಿಂತನಾ ಪ್ರಧಾನತೆಯನ್ನು ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ಸಹ ಕಾಣಬಹುದು.

ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಾದ 'ಹದ್ದು' 'ಇನ್ನಷ್ಟು ಹತ್ತಿರ ಬರುವುದು ಹೇಗೆ?', 'ಮುಂದೇನು?', 'ಏಕಾಂತ', 'ಮಿತವ್ಯಯ', 'ಧೂಮಾಯಣ', 'ಬೆಲೆ', 'ಬೆಂಗಳೂರು' ಮುಂತಾದ ಲಲಿತ ಪ್ರಬಂಧಗಳಲ್ಲಿ ಚಿಂತನೆ ಹಾಸು ಹೊಕ್ಕಾಗಿರುವುದನ್ನು ನೋಡಬಹುದು.

'ಹದ್ದು' ಲಲಿತ ಪ್ರಬಂಧದಲ್ಲಿ ಪದ್ಮಾಸನ ಹಾಕಿ ಪ್ರಾಣಾಯಾಮ ಮಾಡುತ್ತಿದ್ದ ಲೇಖಕರಿಗೆ ಒಂದು ಹಾರಾಡುವ ಹದ್ದು ಭಂಗ ತರುತ್ತದೆ. ಇದರಿಂದ ಲೇಖಕರು ವಿಸ್ಮಿತರಾಗಿ ಚಿಂತನೆ ಆರಂಭಿಸುತ್ತಾರೆ. ಹದ್ದಿನ ಸೌಂದರ್ಯ, ಅದರ ಚಲನವಲನಗಳನ್ನು ನೋಡಿದ ಲೇಖಕರಿಗೆ ಆಲೋಚನಾ ಲಹರಿ ಉಂಟಾಗುತ್ತದೆ. ಭಾವುಕರಾಗಿ 'ಹದ್ದ'ನ್ನು ನೋಡುತ್ತಲೇ ಮಾನವರ ಬದುಕಿನ ಆಗು-ಹೋಗುಗಳು ಪ್ರಬಂಧದ ಹೊಳೆಯುತ್ತವೆ. ಆಹಾರಕ್ಕಾಗಿ ಅಲೆಯುವ 'ಹದ್ದಿ'ನ ಸಂಯಮ ಮಾನವ ಜೀವನದಲ್ಲಿ ಏಕೆ ಬರುವುದಿಲ್ಲ ಎಂಬ ಗಾಢ ಚಿಂತೆ ಪ್ರಬಂಧಕಾರರನ್ನು ಆವರಿಸುತ್ತದೆ. "ಪ್ರತಿಸಲ ಗರ್ಭಧರಿಸಿದಾಗಲೂ ಗಂಡು ಹಕ್ಕಿಯೂ ಭಾಗವಹಿಸಿ ಸಹಕರಿಸುತ್ತದೆ. ಮನುಷ್ಯ ವರ್ಗದಲ್ಲಿ ಗಂಡೆನಿಸಿದ ಪ್ರಾಣಿ ನಿರ್ವಹಿಸುತ್ತದೋ

ಇಲ್ಲವೊ?''[೨] ಎಂಬ ಸಂಗತಿ ಸಣ್ಣಗುಡ್ಡಯ್ಯನವರಿಗೆ ಕಾಡುತ್ತದೆ. 'ಹದ್ದು' ತನ್ನ ಮರಿಗಳಿಗೆ ಬಿಸಿಲು ಬೀಳದಂತೆ ಜೋಪಾನವಾಗಿ ರಕ್ಷಿಸುತ್ತದೆ. ಆದರೆ ಈ ರಕ್ಷಣೆ ಮಾನವ ಕಟ್ಟಿದ ಭವ್ಯ ಬಂಗಲೆಯಲ್ಲಿಲ್ಲ. ತನ್ನ ರೆಕ್ಕೆಗಳನ್ನು ಛತ್ರಿಯಂತೆ ಅಗಲಿಸಿ ಮರಿಗಳ ಮೇಲೆ ಎಚ್ಚರದಿಂದ ರಕ್ಷಣೆ ಮಾಡುತ್ತದೆ. ಹದ್ದಿನ ಎಲ್ಲ ಚಲನ ವಲನಗಳನ್ನು ಕಂಡಂಥ ಪ್ರಬಂಧಕಾರರು ಮನುಷ್ಯನ ಜೀವನ ಕ್ರಮವನ್ನು ನೋಡಿ ಅಸಹ್ಯ ಪಡುತ್ತಾರೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ಮನುಷ್ಯ ಹಕ್ಕಿಯಂತೆ ಆಕಾಶದಲ್ಲಿ ಹಾರಬಲ್ಲ, ಸಮುದ್ರದಲ್ಲಿ ಮೀನಿನಂತೆ ಈಜಬಲ್ಲ. ಆದರೂ ಮಾನವೀಯ ಸಂಬಂಧಗಳಲ್ಲಿ ಮನುಷ್ಯನೆಂಬ ಪ್ರಾಣಿ ದೂರ ಉಳಿದಿರುವುದು ಅವರಿಗೆ ವಿಸ್ಮಯವಾಗಿ ತೋರುತ್ತದೆ. ಸಣ್ಣಗುಡ್ಡಯ್ಯನವರ 'ಹದ್ದು' ಪ್ರಬಂಧದಲ್ಲಿ ಹದ್ದುಗಳ ಬದುಕಿನ ಕ್ರಮ, ಮನುಷ್ಯನಿಗೆ ಚಿತ್ತಾಕರ್ಷಕವಾಗಿ ಕಂಡಿರಬೇಕು. ಇಲ್ಲದಿದ್ದರೆ ಸಾವಿರ ವರುಷಗಳ ಹಿಂದಿನಿಂದ ಪುಷ್ಪಕ ವಿಮಾನದ ಕನಸು ಕಾಣುತ್ತಿರಲಿಲ್ಲ ಎಂಬ ಮಾತು ಬರುತ್ತದೆ. 'ಹದ್ದು' ಒಂದು ಪ್ರಬಂಧಕ್ಕೆ ವಸ್ತುವಾಗಬಲ್ಲದು ಮಾತ್ರವಲ್ಲ, ಅದು ಮಾನವ ಬದುಕಿನ ಮೇಲೆ ಚಿಂತನೆ ನಡೆಸಲು ಒಂದು ಪ್ರೇರಣೆಯೂ ಆಗಬಹುದು ಎಂಬುದು ಇಲ್ಲಿ ತಿಳಿಯುತ್ತದೆ.

ಸಣ್ಣಗುಡ್ಡಯ್ಯನವರ 'ಇನ್ನಷ್ಟು ಹತ್ತಿರ ಬರುವುದು ಹೇಗೆ?' ಎಂಬ ಪ್ರಬಂಧದಲ್ಲಿ ಜಾತಿ ಮತಗಳನ್ನು ಕುರಿತ ಚಿಂತನೆಯನ್ನು ಕಾಣಬಹುದು. ಜಾತಿಯ ಪ್ರಭಾವಕ್ಕೆ ಸಿಲುಕಿದ ಮನುಷ್ಯ ಮಾನವೀಯ ಮೌಲ್ಯಗಳಿಗೆ ವಿಮುಖನಾಗಿದ್ದಾನೆ. ವಾಸ್ತವದಲ್ಲಿ ದಿನದಿಂದ ದಿನಕ್ಕೆ ಜಾತಿ ಕಾರಣದಿಂದಾಗಿ ಅನೇಕ ಬಗೆಯ ಸಂಘರ್ಷಗಳು ಹುಟ್ಟುತ್ತಿರುವುದನ್ನು ಕಾಣಬಹುದು. ಈ ಸಂಘರ್ಷಗಳು ಮನುಷ್ಯ ಮನುಷ್ಯ ನಡುವೆ, ದೊಡ್ಡ ಕಂದರವನ್ನೇ ನಿರ್ಮಿಸಿವೆ. ಈ ವೈರುಧ್ಯವನ್ನು ಗಮನಿಸಿರುವ ಪ್ರಬಂಧಕಾರರು ನಮ್ಮ ಸುತ್ತಮುತ್ತಲ ಬದುಕಿನಲ್ಲಿ ನಡೆಯುವ ಆಚಾರ ವಿಚಾರಗಳನ್ನು ಹೊಸ ಅರ್ಥದಲ್ಲಿ ವಿಶ್ಲೇಷಣೆ ಮಾಡಲು ತೊಡಗುತ್ತಾರೆ.

ಧರ್ಮಗಳು, ಜಾತಿಗಳು ತಮ್ಮ ಹಿಡಿತವನ್ನು ಮನುಷ್ಯನ ಮೇಲೆ ಎಷ್ಟೇ ಸ್ಥಾಪಿಸಿದರೂ ನಿಷ್ಕಲ್ಮಷ ಪ್ರೀತಿಯ ಮುಂದೆ ಅವು ಮುರಿದು ಬೀಳುತ್ತವೆ. ಹಿಂದೂಗಳ ಮದುವೆ ಸಂದರ್ಭದಲ್ಲಿ ಬುರ್ಖಾ ತೊಟ್ಟ ಮಹಿಳೆ ನಿರಾತಂಕವಾಗಿ ಓಡಾಡುವುದು. ಆ ಬಗೆಯ ಓಡಾಟ ಕಂಡು ಬುರ್ಖಾ ತೊಡದ ಮಹಿಳೆಯರಿಗೆ ಏನು ಅನಿಸದೆ 'ಇವಳು' ನಮ್ಮವಳು ಎಂಬ ಭಾವ ಮೂಡುವುದು ಈ ಬಗೆಯ ವರ್ತನೆಗಳನ್ನು ದಿನನಿತ್ಯ ನಮ್ಮ ಸುತ್ತಮುತ್ತಲಿನ ಸಮೂಹ ಜೀವನದಲ್ಲಿ ಕಾಣುತ್ತೇವೆ. ಇಂಥ ನಿಷ್ಕಲ್ಮಷ ಪ್ರೀತಿ ಮತ್ತು ಜೀವನದ ಮಧ್ಯೆ ಮನುಷ್ಯ ಮನುಷ್ಯನನ್ನು ದೂರ ಮಾಡುವ ಜಾತಿ ಅವಶ್ಯಕವೇ? ಎಂದು ಪ್ರಬಂಧಕಾರರು ಪ್ರಶ್ನಿಸುತ್ತಾರೆ.

ಸಣ್ಣಗುಡ್ಡಯ್ಯನವರ ಈ ಪ್ರಬಂಧದಲ್ಲಿ ಧರ್ಮಕ್ಕೋಸ್ಕರ ಕಟ್ಟುಬೀಳುವ ಧರ್ಮಾಂಧರ ಬಗ್ಗೆಯೂ ಟೀಕೆಯಿದೆ. ಹಾಗೆಯೇ ಜೀವನಕ್ಕೆ ಹಾನಿಯಾಗುವಂಥ ಆಚರಣೆಗಳು ಬೇಕೆ? ಜೀವನ ದೊಡ್ಡದೋ ಅಥವಾ ಜೀವನವನ್ನೆ ಕರುಣಹೀನವಾಗಿ ನಿಯಂತ್ರಿಸುವ ಧರ್ಮ ದೊಡ್ಡದೋ ಎನ್ನುವ ಪ್ರಶ್ನೆ ಓದುಗರ ಮುಂದೆ ಲೇಖಕರು ಇಡುತ್ತಾರೆ. ಮನುಷ್ಯ ಸಜೀವ ವಸ್ತುಗಳಿಗೆ ಬೆಲೆ ಕೊಡುವುದಕ್ಕಿಂತ ಮುಖ್ಯವಾಗಿ ನಿರ್ಜೀವ ವಸ್ತುಗಳಿಗೆ ಬೆಲೆ ಕೊಡುತ್ತಿದ್ದಾನೆ. ಉಡುಗೆ-ತೊಡುಗೆಯ ಮಧ್ಯೆ, ಆಹಾರ ಸೇವನೆಯ ಮಧ್ಯೆ, ಆಚಾರ-ವಿಚಾರಗಳ ಮಧ್ಯೆ, ಭಿನ್ನತೆ ಹುಡುಕುವ ನೆಪದಲ್ಲಿ ಧರ್ಮಾಂಧನಾಗುತ್ತಿದ್ದಾನೆ. ದಿನದಿಂದ ದಿನಕ್ಕೆ ಮನುಷ್ಯ ಸಾಂಘಿಕ ಜೀವನದಿಂದ ದೂರ ಸರಿಯುತ್ತಿದ್ದಾನೆ. ಆದ್ದರಿಂದ ಅವನ್ನೆಲ್ಲ ಮರೆತು 'ಎಲ್ಲರೂ' ಒಂದಾಗಿ ಜೀವಿಸುವ ಅಗತ್ಯವಿದೆ ಎಂದು ಪ್ರಬಂಧ ಧ್ವನಿಸುತ್ತದೆ. ಸೂಕ್ಷ್ಮ ಸಂವೇದನೆಯ ಮನಸ್ಸುಳ್ಳ ಲೇಖಕರಿಗೆ ಜಾತಿ, ಧರ್ಮಕ್ಕಿಂತ ಮಿಗಿಲಾದ 'ಮನುಷ್ಯ ಜೀವನ' ಮುಖ್ಯವೆನಿಸುತ್ತದೆ.

ಸಣ್ಣಗುಡ್ಡಯ್ಯನವರ 'ಮನೆ' ಪ್ರಬಂಧದಲ್ಲಿ ದುಡಿಮೆಯ ಬಳಲಿಕೆಯಿಂದ ವಿದಾಯ ಹೇಳಬೇಕೆನಿಸಿದಾಗ ವಿಶ್ರಾಂತಿ ಹೊಂದಲು ಮನೆ ಎಂಬ ಮಂದಿರದಲ್ಲೇ ಹೇಗೆ ಸುಖವನ್ನು ಅನುಭವಿಸಬೇಕಾಗುತ್ತದೆ ಎಂಬುದರ ಚಿಂತನೆಯಿದೆ. ಪ್ರಬಂಧಕಾರರು ಮುಂದುವರೆದು ಮನೆಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಕುವೆಂಪು ರಚಿಸಿರುವ 'ಮನೆ ನನ್ನ ಮನೆ' ಎಂಬ ನೀಳ್ಗವನವನ್ನೂ ಕೆ.ಎಸ್.ನರಸಿಂಹಸ್ವಾಮಿಯವರ 'ಮನೆಯಿಂದ ಮನೆಗೆ' ಎಂಬ ಕವನವನ್ನೂ ನವ್ಯ ಲೇಖಕ ಜಿ.ಟಿ.ರಾಘುವರ 'ಮನೆ' ಕಾದಂಬರಿಯನ್ನೂ ಸಹ ಚರ್ಚಿಸುತ್ತಾರೆ. ಜೀವನದಲ್ಲಿ 'ಮನೆ'ಯ ಪ್ರಾಮುಖ್ಯತೆ ಬಹಳ ದೊಡ್ಡದು. ಮನೆಯುಳ್ಳವರಿಗೆ ಒಂದು ಬಗೆಯ ಸಂಕಟವಾದರೆ ಮನೆಯಿಲ್ಲದವರಿಗೆ ಇನ್ನೊಂದು ಬಗೆಯ ಸಂಕಟ. ಜೀವನದಲ್ಲಿ 'ಮನೆ' ಕಟ್ಟಲಿಲ್ಲವಲ್ಲ ಎಂಬ ಕೊರತೆ ಕೆಲವರ ಮೂಡುತ್ತದೆ. ಕಷ್ಟಪಟ್ಟು ಮನೆಯನ್ನು ಕಟ್ಟಿದ ಮೇಲೂ ಆ ಕೊರತೆ ಹೊಸ ರೂಪದಲ್ಲಿ ಮಾಲೀಕರನ್ನು ಕಾಡುತ್ತದೆ. ಇಷ್ಟು ಕಷ್ಟಪಟ್ಟು ಕಟ್ಟಿದ ಮನೆಯನ್ನು ಬಾಡಿಗೆಗೆ ಕೊಡುವುದೆ? ಒಂದು ವೇಳೆ ಬಾಡಿಗೆಗೆ ಕೊಟ್ಟರೂ 'ಎಂಥವರು' ಬರುತ್ತಾರೆ ಎಂಬ ಸಂಕಟ ಹೀಗೆ ಹಲವು ಮುಖಗಳನ್ನು ತಾಳುತ್ತದೆ.

'ಮನೆ' ಎಂಬುದು ಸ್ವರ್ಗದ ತಾಣ. ಮನೆಯಲ್ಲಿ ಅನೇಕ ಕರುಳ ಬಳ್ಳಿಯ ಸಂಬಂಧವಿರುತ್ತದೆ. ಆ ಬಗೆಯ ಸಂಬಂಧಗಳೇ ದೂರ ಹೋದ ಮನಸ್ಸುಗಳನ್ನು ಹತ್ತಿರಕ್ಕೆ ತಂದುಕೊಳ್ಳುತ್ತವೆ. ಹಂಗಿನ ಅರಮನೆಗಿಂತ ನಮಗೆ ನಮ್ಮ ನಮ್ಮ ಮನೆಗಳು ಬಹಳ ಇಷ್ಟವಾಗುತ್ತವೆ. ಮನೆಯ ಕುರಿತು ಮಾಲೀಕರದು ಒಂದು ಬಗೆಯ ಚಿಂತನೆಯಾದರೆ ಬಾಡಿಗೆಯವರದು ಇನ್ನೊಂದು ಬಗೆಯ ಚಿಂತೆ. ಈ ದುಬಾರಿ ಕಾಲದಲ್ಲಿ ಮನೆ ಕಟ್ಟುವುದು ಯಾವಾಗ ಎಂಬ ಚಿಂತೆ ಆವರಿಸುತ್ತದೆ. ಪ್ರಬಂಧದ ಕೊನೆಯಲ್ಲಿ ಹಾಸ್ಯದ ಸನ್ನಿವೇಶಗಳು ಬಂದಿದ್ದರೂ ಅದು ನಿಜಕ್ಕೂ ಗಂಭೀರವಾದ ಚಿಂತನೆಯನ್ನು ಒಳಗೊಂಡಿದೆ.

ಉದಾಹರಣೆಗೆ ಭೌತ ವಿಜ್ಞಾನಿಯೊರ್ವರು "ಜನರನ್ನು ಕೊಂದದ್ದು ಭೂಕಂಪವಲ್ಲ; ಅವರು ಕಟ್ಟಿಸಿದ ಮನೆಗಳು" ಎಂಬ ಮಾತು ಹಾಸ್ಯವಾಗಿ ಮೂಡಿಬಂದಿದ್ದರೂ ಗಂಭೀರವಾದ ಚಿಂತನೆಗೆ ಪ್ರೇರಣೆ ನೀಡುತ್ತದೆ.

ಸಣ್ಣಗುಡ್ಡಯ್ಯನವರು ಮನೆಯ ಬಗ್ಗೆ ಇರುವ ಜನರಲ್ಲಿ ಗೌರವವನ್ನು ಹೇಳುತ್ತಾ ದೇಶದಲ್ಲಿ ಆಗುವ ಪ್ರಚಲಿತ ಘಟನೆಗಳನ್ನು ಕಂಡು ವಿಸ್ಮಯಪಡುತ್ತಾರೆ. ಮನುಷ್ಯ ಇಂತಹ ಒಂದು ಮನೆಗಾಗಿ ಪಡುವ ಶ್ರಮ, ನರಳಿಕೆ ಇವೆಲ್ಲವೂ ಅವರ ಗಮನಕ್ಕೆ ಬರುತ್ತವೆ. ನಾಲ್ಕು ಗೋಡೆಯ 'ಮನೆ' ಎಂಬ ಎರಡೇ ಪದಗಳಲ್ಲಿ ಅಡಗಿರುವ ಗೌಪ್ಯತೆ ಅಸಾಧಾರಣವಾದುದಾಗಿದೆ. 'ಮನೆ ಕಟ್ಟಿ ನೋಡು' ಎಂಬ ಸವಾಲಿಗೆ ಮನುಷ್ಯ ಪಡುವ ವ್ಯಥೆಯನ್ನು ಈ ಪ್ರಬಂಧದಲ್ಲಿ ಸೂಕ್ಷ್ಮವಾಗಿ ಪ್ರಬಂಧಕಾರರು ಚಿತ್ರಿಸಿದ್ದಾರೆ.

ಸಣ್ಣಗುಡ್ಡಯ್ಯನವರ 'ಏಕಾಂತ' ಮತ್ತು 'ಮಿತವ್ಯಯ' ಈ ಎರಡೂ ಪ್ರಬಂಧಗಳು ತಮ್ಮ ವಿಚಾರದ ಸತ್ವಪೂರ್ಣತೆಯಿಂದ ಹಾಗೂ ನಿರೂಪಣಾ ವೈಖರಿಯಿಂದ ಮನಸ್ಸನ್ನು ಸೆಳೆದುಬಿಡುತ್ತವೆ. ಪ್ರಬಂಧದ ನಿರೂಪಣೆ ಸಡಿಲ ಬಂಧದಲ್ಲಿ ಪ್ರಾರಂಭವಾಗುತ್ತಾ ಮುಂದೆ ಸಾಗಿ ಗಂಭೀರವಾಗಿ ಬೆಳೆಯುವುದನ್ನು ಗಮನಿಸಬಹುದು. ಈ ಎರಡೂ ಪ್ರಬಂಧಗಳಲ್ಲಿ ನಮ್ಮ ರೂಢಿಯ ಕಲ್ಪನೆಗೆ ಧಕ್ಕೆ ಕೊಡುವಂತೆ ವಿರುದ್ಧ ದಿಕ್ಕಿನಿಂದ ವಾದ ಹೂಡುವ ರೀತಿ ಕಂಡುಬರುತ್ತದೆ. 'ಏಕಾಕಿ ನ ರಮತೇ' ಎನ್ನುವ ಮಾತಿಗೆ ವಿರುದ್ಧವಾಗಿ "ನಮ್ಮ ರಮಿಸುವಿಕೆ, ಸುಖ ಎಲ್ಲವೂ ಒಂದು ಏಕಾಕಿತನದ ಕ್ರಿಯೆಯೇ ಸರಿ" ಎಂಬುದೇ ಪ್ರಬಂಧಕಾರರ ವಾದವಾಗಿದೆ. ಮನುಷ್ಯ ಸಂಘಜೀವಿ. ಸಮಾಜ ಜೀವಿ ಎಂದೆಲ್ಲಾ ಸಮಾಜ ಶಾಸ್ತ್ರ ಸಾರುತ್ತಿದ್ದರೆ, ಒಂಟಿತನವು ಒಂದು ಶಾಪ. ಒಂಟಿ ಬಾಳು ಬಾಳಲ್ಲ ಎಂದು ಲೋಕಾನುಭವ ಹೇಳುತ್ತದೆ. ಆದರೆ ಪ್ರಬಂಧಕಾರರ ಪ್ರಮೇಯ ಮನುಷ್ಯ ಇಡೀ ಜಗತ್ತಿನಲ್ಲಿ ಏಕಾಕಿ; "ಪ್ರತಿಯೊಬ್ಬನ ಜೀವಿತದ ಕಥೆಯೂ ಮರ್ತ್ಯಜೀವಿಯ ಒಂಟಿತನದ ಕಥೆ. ಜಗತ್ತಿನ ಇತಿಹಾಸ ಆ ಒಂಟಿತನವನ್ನು ಮುರಿಯಲಾರದ ಮನುಷ್ಯನ ಅಸಹಾಯಕತೆಯ ಇತಿಹಾಸ." ಮುಕ್ತಿ ಎಂಬುದು ಕೂಡಾ - "ಮನುಷ್ಯನ ಏಕಾಕಿತನಕ್ಕಿಟ್ಟ ಇನ್ನೊಂದು ಹೆಸರು" ಆಗಿದೆ. ಹಾಗೆಯೇ ನಗರದ ಉಪ್ಪರಿಗೆಯೊಂದರ ಮೇಲಿಂದ ನೋಡಿದರೆ "ಬೀದಿಗಳಲ್ಲಿ ಕಿಕ್ಕಿರಿದು ಹರಿಯುತ್ತಿರುವ ಜನ ಪ್ರವಾಹದಲ್ಲಿ ಒಬ್ಬೊಬ್ಬನೂ ಒಂಟಿಗನಾಗಿ ಚಲಿಸುತ್ತಿರುವುದನ್ನು ನೋಡಬಹುದು. ಪ್ರತಿಯೊಬ್ಬನಿಗೂ ತನ್ನದೇ ಆದ ಕಾತುರ, ಭಯ, ಮುಜುಗರ ಇರುವುದು ತಿಳಿಯುತ್ತದೆ. ಇದರಲ್ಲಿ ಯಾವೊಂದು ಅಂಶ ತೆಗೆದುಕೊಂಡು ನೋಡಿದರೂ ಅದು ಮನುಷ್ಯನು ಒಂಟಿತನವಿಟ್ಟ ಮೊಟ್ಟೆ"[೩] ಎಂದು ತಿಳಿಯುತ್ತದೆ ಎಂದು ಪ್ರಬಂಧ ಸೂಚಿಸುತ್ತದೆ.

ತಾಯಿ ಮಗುವಿನ ಸಂಬಂಧವಿರಬಹುದು. ತಂದೆ ಮಗುವನ್ನು ಮುದ್ದಿಸುವ ಸಂದರ್ಭವಿರಬಹುದು. ಗಂಡು ಹೆಣ್ಣಿನ ದೈಹಿಕ ಸಂಬಂಧವಿರಬಹುದು. ಇವುಗಳಲ್ಲಿ ಕಂಡುಬರುವುದು ಒಂಟಿತನವನ್ನು ಮುರಿಯುವ ಮನುಷ್ಯನ ಅಸಫಲ ಪ್ರಯತ್ನವೇ ಹೊರತು ಬೇರೆಯಲ್ಲ ಎಂದು ಪ್ರಬಂಧ ವಾದಿಸುತ್ತದೆ.

ಮನುಷ್ಯನ ಒಂಟಿತನವನ್ನು ಸಾರಿ ಹೇಳುವ ಈ ಪ್ರಬಂಧದ ಚಿಂತನೆಗಳು ಅಸ್ತಿತ್ವವಾದಿಗಳ ಚಿಂತನೆಯನ್ನು ನೆನಪಿಗೆ ತರುತ್ತವೆ.

ಸಣ್ಣಗುಡ್ಡಯ್ಯನವರ 'ಧೂಮಾಯಣ' ಪ್ರಬಂಧದಲ್ಲಿ ಅದರ ನಾಯಕನು ಧೂಮಪಾನದ ಚಟಕ್ಕೆ ಗಂಟು ಬಿದ್ದ ಬಗೆ, ಅದರ ಆಕರ್ಷಣೆಯಿಂದ ಬಿಡುಗಡೆ ಹೊಂದಲೇಬೇಕೆಂದು ಮಾಡುವ ' ನಿರಂತರ ಪ್ರಯತ್ನ ಮತ್ತು ವ್ಯರ್ಥ ಹೋರಾಟ ಇವುಗಳನ್ನು ಅತ್ಯಂತ ಸ್ವಾರಸ್ಯಕರವಾಗಿ ಚಿತ್ರಿಸಲಾಗಿದೆ. ಲೇಖಕರು ಸಿಗರೇಟನ್ನು ತಂಬಾಕು ಕನ್ಯೆ, ನಿಕೋಟನಾ ದೇವಿ, ಕರ್ಪೂರ ಶಿಲಾಕೆ, ಸಿಗರೇಟು ಸಖಿ, ಬಿಳಿಯ ಹುಡುಗಿ, ಅಗ್ನಿಮುಖಿ, ತಂಬಾಕು ರಮಣಿ ಎಂದೆಲ್ಲ ವಿಧ ವಿಧವಾದ ಹೆಸರಿಟ್ಟಿರುವುದು ತುಂಬಾ ಸೊಗಸಾಗಿದೆ. ಈ ಪ್ರಬಂಧವು ಅಂತಿಮವಾಗಿ ಅಪಾಯಕಾರಿಗಳಾಗಿರುವ ವಸ್ತುಗಳೇ ಈ ಲೋಕದಲ್ಲಿ ಸಮ್ಮೋಹನಕಾರಿಗಳಾಗಿರುವುದು ಈ ಸಂಸ್ಕೃತಿಯ ಧರ್ಮದ ರಹಸ್ಯವೋ ಎಂಬಂಥ ವಿಚಾರವನ್ನು ಮುಂದಿಟ್ಟು ಗಹನವಾದ ತಾತ್ವಿಕ ಚಿಂತನೆಗೆ ಪ್ರೇರಿಪಿಸುತ್ತದೆ.

ಸಣ್ಣಗುಡ್ಡಯ್ಯನವರ 'ಬೆಲೆ' ಪ್ರಬಂಧದಲ್ಲಿ ಆರ್ಥಿಕ ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳು ಕಂಡುಬರುತ್ತವೆ. 'ಬೆಲೆ' ಎಂಬ ಅರ್ಥವನ್ನು ಪ್ರಬಂಧಕಾರರು ಮನುಷ್ಯನ ಮೌಲ್ಯಗಳಿಗೆ ಹೋಲಿಕೆ ಮಾಡಿದ್ದಾರೆ. ರೈತರು ಬೆಳೆದಂಥ ಬೆಳೆಯು ಮಾರುಕಟ್ಟೆಯಲ್ಲಿ ಹೇಗೆ ಕುಸಿತ ಕಾಣುತ್ತದೆಯೋ ಹಾಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯನ ಮೌಲ್ಯಗಳು ಕುಸಿಯಬಾರದು. ಇಂಥ ಮೌಲ್ಯಗಳು ಕುಸಿದಾಗ ಸಾಮಾಜಿಕವಾಗಿ ಮನುಷ್ಯ ಅಧಃಪತನಕ್ಕೆ ಒಳಗಾಗುತ್ತಾನೆ ಎಂದು ಪ್ರಬಂಧವು ಸೂಚಿಸುತ್ತದೆ. ಬಂಡವಾಳ ಪ್ರಭುತ್ವದಲ್ಲಿ ಖಾಸಗಿ ಹಣ ನಿರ್ಮಿಸಿದ ವ್ಯವಸ್ಥೆಯ ಸೌಧ ಕುಸಿಯಬೇಕು ಎಂಬ ನಿಲುವನ್ನು ಈ ಪ್ರಬಂಧದಲ್ಲಿ ಹೇಳಲಾಗಿದೆ. ಬೇಂದ್ರೆಯವರ 'ಕುರುಡು ಕಾಂಚಾಣ' ಕವನದ ಸಾಲಿನಂತೆ "ಹ್ಯಾಂಗಾರೆ ಕುಣಿಕುಣಿದು ಮಂಗಾಟ ನಡೆದಾಗ ಅಂಗಾತ ಬಿತ್ತೋ ಹೆಗಲಲಿ ಎತ್ತೋ" ಎಂಬ ಭರವಸೆ ತಾಳಬೇಕು ಎಂಬ ಮಾತು ಇಲ್ಲಿ ಬರುತ್ತದೆ. ಆದರೂ ಜನಪರವಾದ ನಿಲುವು ಸಮರ್ಪಕವಾದ ರೀತಿಯಲ್ಲಿ ಬೆಳೆಯದೆ ಆತುರದ ತೀರ್ಮಾನವನ್ನು ತಲುಪುವುದು ಈ ಪ್ರಬಂಧದಲ್ಲಿ ಕಂಡುಬರುತ್ತದೆ.

ಸಣ್ಣಗುಡ್ಡಯ್ಯನವರ 'ಬೆಂಗಳೂರು' ಪ್ರಬಂಧದಲ್ಲಿ ಜನಜೀವನದ ಮೇಲಾಗಿರುವ ನಾಗರಿಕತೆಯ ದಾಳಿ ಹಾಗೂ ಅದರ ಪರಿಣಾಮವಾಗಿ ಆಗಿರುವ ಆಘಾತ ಮತ್ತು ದುರಂತಗಳ ಚಿತ್ರಣ ಬರುತ್ತದೆ. ಇದರ ಜೊತೆಗೆ ಲೇಖಕರ ಸಮಾಜವಾದಿ ಚಿಂತನೆಗಳು ಕೂಡ ಇಲ್ಲಿ ವ್ಯಕ್ತವಾಗುತ್ತವೆ. ನಗರದಲ್ಲಿ ನಡೆಯುವ ಅಧಿಕಾರದ ಕೇಂದ್ರೀಕರಣ, ಎಲ್ಲಾ ವ್ಯವಹಾರಗಳ ಬೆನ್ನಿಗಿರುವ ಹಣದ ಅಮಲಿನಲ್ಲಿರುವ ಒಡೆಯರು, ಜನ ಜೀವನವನ್ನು ಅಸ್ತವ್ಯಸ್ತಗೊಳಿಸಬಲ್ಲ ಮುಷ್ಕರಗಳು, ಗಲಭೆಗಳು ಬದುಕನ್ನು ತಲ್ಲಣಕ್ಕೆ ಈಡುಮಾಡುವುದನ್ನು ನೋಡಬಹುದು. ಎ.ಎನ್.ಮೂರ್ತಿರಾವ್ ಅವರ 'ಬೆಂಗಳೂರು' ಪ್ರಬಂಧವನ್ನು ಸಣ್ಣಗುಡ್ಡಯ್ಯನವರ 'ಬೆಂಗಳೂರು' ಪ್ರಬಂಧಕ್ಕೆ ಹೋಲಿಸಿ ನೋಡಿದರೆ ಎರಡಕ್ಕೂ

ಇರುವ ವ್ಯತ್ಯಾಸ ಗೋಚರಿಸುತ್ತದೆ. ಎ.ಎನ್.ಮೂರ್ತಿರಾವ್ ಅವರು ಕೇವಲ ನಗರಜೀವನದ ಕೆಲವೇ ಆಯ್ದ ಮುಖಗಳನ್ನು ಚಿತ್ರಿಸಿದ್ದಾರೆ. ಆದರೆ ಸಣ್ಣಗುಡ್ಡಯ್ಯನವರು ನಗರ ಜೀವನದ ಜೊತೆಗೆ ಇರುವ ಅಲ್ಲಿನ ಕಾರ್ಮಿಕರ ಕಠಿಣ ಜೀವನವನ್ನು ಚಿತ್ರಿಸುತ್ತಾರೆ. ಇದು ಪ್ರಬಂಧದ ಸಾಮಾಜಿಕಬದ್ಧತೆಯನ್ನು ಸೂಚಿಸುತ್ತದೆ.

ಸಣ್ಣಗುಡ್ಡಯ್ಯನವರ ಪ್ರಬಂಧಗಳ ವಿಶೇಷತೆ ಎಂದರೆ, ಸಾಮಾಜಿಕ ಮತ್ತು ರಾಜಕೀಯ ಸ್ವರೂಪದ ಚಿಂತನೆಗಳನ್ನು ಒಳಗೊಂಡಿರುವುದು. ಇವು ಒಟ್ಟಾರೆಯಾಗಿ ಜೀವನ ಪರ ಮತ್ತು ಆರೋಗ್ಯಕಾರಿ ದೃಷ್ಟಿಯಿಂದ ನೈತಿಕ ನೆಲೆಗಟ್ಟಿನ ಮೇಲೆ ನಿಂತಿರುವ ಈ ಪ್ರಬಂಧದಲ್ಲಿ ನಮ್ಮ ಬದುಕು ಹಾಳಾಗುತ್ತಿರುವುದರ ಬಗ್ಗೆ ಕಾಣುತ್ತೇವೆ.

ಸಣ್ಣಗುಡ್ಡಯ್ಯನವರ ಬಹುತೇಕ ಪ್ರಬಂಧಗಳಲ್ಲಿ ನಾಗರಿಕತೆಯು ತನ್ನ ಜತೆಗೆ ತರುವ ಕೇಡುಗಳು, ಬದುಕಿಗೆ ತಂದೊಡ್ಡುವ ಆಘಾತಗಳ ಚಿತ್ರಣವಿದೆ. ಮೌಲ್ಯಗಳು ಕುಸಿಯುತ್ತಿರುವ ಬಗ್ಗೆ, ಹಾಗೂ ಅದು ಉಂಟು ಮಾಡುವ ತಲ್ಲಣಗಳ ಬಗ್ಗೆ ದುಗುಡವಿದೆ. ಜನರ ಅಭಿರುಚಿ ಸಂಸ್ಕರಣೆ ಮತ್ತು ಅಭಿರುಚಿ ಸಂವರ್ಧನೆಗಳ ಮೂಲಕ ಬದುಕನ್ನು ಸುಂದರಗೊಳಿಸಬೇಕೆಂಬುದರ ವಿಷಯದಲ್ಲಿ ತೀವ್ರ ತುಡಿತವಿದೆ. ಸೊಗಸಾದ ಗದ್ಯದಲ್ಲಿ ಆಕರ್ಷಕವಾಗಿ ನಿರೂಪಿತವಾಗಿರುವ ಇಲ್ಲಿನ ಚಿಂತನ ಪರ ಪ್ರಬಂಧಗಳು ಬುದ್ದಿಗೆ ಬೆಳಕನ್ನೂ ಹೃದಯಕ್ಕೆ ಸಂತೋಷವನ್ನೂ ನೀಡುತ್ತವೆ. ಹೀಗಾಗಿ ಕನ್ನಡ ಪ್ರಬಂಧ ಸಾಹಿತ್ಯದಲ್ಲಿ ಶ್ರೀಯುತರ ಚಿಂತನೆಗಳು ಬೆಲೆಯುಳ್ಳ ಕೊಡುಗೆಗಳಾಗಿವೆ. ಸಣ್ಣಗುಡ್ಡಯ್ಯನವರ ಪ್ರಬಂಧಗಳು ಪ್ರಧಾನವಾಗಿ ಚಿಂತನಪರವೇ ಆದರೂ ಪು.ತಿ.ನ ಅವರ ಪ್ರಬಂಧಗಳ ಭಾಷೆಯಂತೆ ಬಿಗುವಿನಿಂದ ಕೂಡಿಲ್ಲ. ಬದಲಿಗೆ ತಮ್ಮ ಪ್ರಸಾದ ಗುಣದಿಂದ ತಿಳಿಯಾಗಿವೆ. ಇವುಗಳ ಚಿಂತನೆಯ ಸ್ವರೂಪ ಸಂಕೀರ್ಣವಾದರೂ ಸೂಕ್ಷ್ಮ ವಿಶ್ಲೇಷಣೆಯಿಂದ ಕೂಡಿದ್ದು ಅಚ್ಚುಕಟ್ಟಾದ ರಚನೆಗಳಾಗಿವೆ. ಆದ್ದರಿಂದ ಇವು ಸುಲಭವಾಗಿ ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿವೆ.

ಈ ಪ್ರಬಂಧಗಳನ್ನು ಕುರಿತು ಬರೆಯುವ ರಾ. ಲಕ್ಷ್ಮಿನಾರಾಯಣರ ಪ್ರಕಾರ, ''ಪ್ರೊ. ಎಚ್.ಜಿ.ಎಸ್. ಅವರದು ಕವಿ ಹೃದಯ. ಅವರ ಬುದ್ಧಿ ಒಬ್ಬ ಚಿಂತಕನದು. ಅವರ ಬದುಕು ಒಬ್ಬ ಅಧ್ಯಾಪಕನದು. ಎಚ್.ಜಿ.ಎಸ್. ಅವರ ಪ್ರಬಂಧಗಳೆಲ್ಲ ಅಧ್ಯಾಪಕನ ಬದುಕಿನ ಹಿನ್ನೆಲೆಯಲ್ಲಿ ಒಡಮೂಡಿರುವ ಕವಿ ಮನದ ಚಿಂತನೆಗಳು ಎನ್ನುವುದು ಹೆಚ್ಚುಸೂಕ್ತ. ಬದುಕನ್ನು ಅಖಂಡವಾಗಿ ಪ್ರೀತಿಸುವಂಥ ಸೃಜನಶೀಲ ಮನಸ್ಸೊಂದು ತನ್ನ ಇಡೀ ವ್ಯಕ್ತಿತ್ವವನ್ನೇ ಇಲ್ಲಿಯ ಪ್ರಬಂಧಗಳಲ್ಲಿ ತೊಡಗಿಸಿಕೊಂಡಿದೆ ಹಾಗೂ ವ್ಯಕ್ತಿ ವಿಶಿಷ್ಟವಾದ ಅನುಭವಗಳ ಮೂಲಕವೇ ಬದುಕನ್ನು ನೋಡುವುದು ಇಲ್ಲಿಯ ಕ್ರಮವಾಗಿದೆ. ಎಲ್ಲ ಪ್ರಬಂಧಗಳಲ್ಲಿ ನಾವು ಕಾಣುವುದು ಗಂಭೀರವಾದ ಚಿಂತನಶೀಲತೆ, ಆದರೆ ಆ ಚಿಂತನೆ ಎಲ್ಲೂ ಭಾರವಾಗುವುದಿಲ್ಲ. ನವುರಾದ ಹಾಸ್ಯದಿಂದ ಕೂಡಿದ ಈ ಚಿಂತನಾತ್ಮಕ ಪ್ರಬಂಧಗಳು ಹದವಾದ

ಗದ್ಯದಲ್ಲಿ ಅಭಿವ್ಯಕ್ತಿಯನ್ನು ಪಡೆದುಕೊಂಡಿರುವುದರಿಂದ ಎಲ್ಲಿಯೂ ಹರಟೆಯ ಲಘುತ್ವಕ್ಕೆ ಇಳಿಯುವುದಿಲ್ಲ. ಬಹುಪಾಲು ಪ್ರಬಂಧಗಳು ಘಟನೆಗಳನ್ನು ಆಶ್ರಯಿಸುತ್ತವಾದರೂ, ಘಟನೆಯೇ ಕೇಂದ್ರ ಬಿಂದುವಾಗುವುದಿಲ್ಲ. ವಿಷಯ ಪ್ರತಿಪಾದನೆಗೆ, ವಸ್ತುವಿಗೆ, ವಿಸ್ತಾರ ವೈವಿಧ್ಯಗಳನ್ನು ತಂದುಕೊಡಲು ಅದರ ಬಳಕೆಯಾಗುತ್ತದೆ ಅಷ್ಟೇ.."[೪]

ಸೊಗಸಾದ ಗದ್ಯದಲ್ಲಿ ಆಕರ್ಷಕವಾಗಿ ನಿರೂಪಿತವಾಗಿರುವ ಈ ಚಿಂತನಪರ ಪ್ರಬಂಧಗಳು ಬುದ್ಧಿಗೆ ಬೆಳಕನ್ನೂ, ಹೃದಯಕ್ಕೆ ಸಂತೋಷವನ್ನು ನೀಡುತ್ತ ವಿಚಾರವಂತಿಕೆಗೆ ಕಲಾ ಮಾಧ್ಯಮಗಳಾಗಿ ಮೂಡಿ ಬಂದಿರುವ ಕಾರಣದಿಂದಾಗಿ ಕನ್ನಡ ಪ್ರಬಂಧ ಸಾಹಿತ್ಯಕ್ಕೆ ಬೆಲೆಯುಳ್ಳ ಕೊಡುಗೆಗಳಾಗಿವೆ.

## ೨.೩. ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ಬಾಲ್ಯ ಕಾಲದ ನೆನಪುಗಳು

ಜೀವನದ ನಾಲ್ಕು ಅವಸ್ಥೆಗಳಲ್ಲಿ ಬಾಲ್ಯಾವಸ್ಥೆಯೂ ಒಂದಾಗಿದೆ. ಜೀವನದ ಅಂತಿಮ ಹಂತವನ್ನು ತಲುಪಿದವರು, ಈ ಬಾಲ್ಯಾವಸ್ಥೆಯನ್ನು ದಾಟಿ ಬರಲೇಬೇಕು. ತುಂಬು ಜೀವನದ ಮಹಲಿಗೆ ಬಾಲ್ಯವಸ್ಥೆಯು ಬುನಾದಿಯಂತೆ ಕಾರ್ಯನಿರ್ವಹಿಸುತ್ತದೆ. ಬಾಲ್ಯ ಜೀವನವು ನಿಷ್ಕಲ್ಮಷವಾದುದು. ಬಾಲ್ಯದ ಮುಖ್ಯ ಗುಣಗಳು ಸ್ನೇಹ ಮತ್ತು ಪ್ರೀತಿ. ಇವುಗಳ ಆಧಾರದ ಮೇಲೆ ಬೆಳೆಯುವ ಬಾಲ್ಯ ತನ್ನದೇ ಆದ ವಿಶೇಷ ಚಹರೆಯನ್ನು ಜೀವನದ ಕೊನೆಯ ತನಕವೂ ಉಳಿಸಿಕೊಂಡು ಬರುತ್ತದೆ.

ಬಾಲ್ಯದಲ್ಲಿ ನಮಗೆ ಅರಿವಿಗೆ ಬಾರದೆ ಅನೇಕ ಘಟನೆಗಳು ಕಣ್ಮುಂದೆ ಸಾಗುತ್ತಿರುತ್ತವೆ. ಬಾಲ್ಯದಲ್ಲಿರುವ ಯಾವ ಮಗುವೂ ಕೂಡ ಪ್ರಜ್ಞಾಪೂರ್ವಕವಾಗಿ ಯೋಚಿಸಿ ಕಳೆದು ಹೋಗುವ ನೆನಪುಗಳನ್ನು ಹಿಡಿದಿಟ್ಟುಕೊಳ್ಳಬೇಕೆಂದು ಲೆಕ್ಕ ಹಾಕುವುದಿಲ್ಲ. ಆದರೆ ಅರಿವಿಗೆ ಬಾರದಂತೆ ಬಾಲ್ಯದ ನೆನಪುಗಳು ಸ್ಮೃತಿ ಪಟಲದಲ್ಲಿ ಸವೆಯದ ಹಾಗೆ ಉಳಿದುಬಿಡುತ್ತವೆ. ಹಲವಾರು ಕಾರಣದಿಂದಾಗಿ ಬಾಲ್ಯದ ನೆನಪುಗಳನ್ನು ಮರೆತಿರುವಂತೆ ನಾಟಕ ಮಾಡಬಹುದು. ಆದರೆ ಬಾಲ್ಯದ ನೆನಪುಗಳು ಮಾತ್ರ ದಿನದಿಂದ ದಿನಕ್ಕೆ ಜಾಗೃತಗೊಳ್ಳುತ್ತವೆ.

ಈ ನಿಟ್ಟಿನಲ್ಲಿ ಸಣ್ಣಗುಡ್ಡಯ್ಯನವರು ಬರೆದಿರುವ 'ಏಕಾಂತ ಮತ್ತು ಇತರ ಪ್ರಬಂಧಗಳು' ಮತ್ತು "ಹದ್ದು ಮತ್ತು ಇತರ ಪ್ರಬಂಧ" ಸಂಕಲನಗಳಲ್ಲಿ ಮೂಡಿ ಬಂದಿರುವ ಬಾಲ್ಯದ ನೆನಪುಗಳನ್ನು ಸೆರೆ ಹಿಡಿಯಲಾಗಿದೆ. ಅದರಲ್ಲೂ ಮುಖ್ಯವಾಗಿ ಗ್ರಾಮೀಣ ಭಾಗದಿಂದ ಬಂದಿರುವಂಥ ಲೇಖಕರು ಬಾಲ್ಯದಲ್ಲಿ ಕಳೆದ ಅನೇಕ ಘಟನೆಗಳನ್ನು ನೆನಪಿಸಿಕೊಳ್ಳುತ್ತಾರೆ. ಗಿಡಮರಗಳ ನೆನಪು, 'ಚೌಲ' ಮಾಡಿಸಲು ಗುಡ್ಡದ ತಿಮ್ಮಪ್ಪನ ಬೆಟ್ಟಕ್ಕೆ ಹೋದ ಸಂದರ್ಭ, ಬೀಡಿ ಸೇವನೆಯ ನೆನಪು ಹೀಗೆ ಸಣ್ಣಗುಡ್ಡಯ್ಯನವರ ಪ್ರಬಂಧಗಳಲ್ಲಿ ಬಾಲ್ಯ ಕಾಲದ ದಟ್ಟ ನೆನಪುಗಳನ್ನು ಕಾಣಬಹುದಾಗಿದೆ.

ಸಣ್ಣಗುಡ್ಡಯ್ಯನವರ "ಇನ್ನಷ್ಟು ಹತ್ತಿರ ಬರುವುದು ಹೇಗೆ?" ಪ್ರಬಂಧದಲ್ಲಿ ಬಾಲ್ಯ ಕಾಲದ ನೆನಪುಗಳನ್ನು ಮೆಲುಕು ಹಾಕುವುದನ್ನು ನೋಡುತ್ತೇವೆ. ಬಾಲ್ಯ ಕಾಲದ ನೆನಪುಗಳು ಅಷ್ಟಾಗಿ ಬೇಗ ಕಣ್ಮರೆಯಾಗುವಂಥ ಘಟನೆಗಳಲ್ಲ. ನಮ್ಮ ಮನಸ್ಸುಗಳಲ್ಲಿ ಇಂಥ ಬಾಲ್ಯ ಕಾಲದ ನೆನಪುಗಳು ಸದಾ ಹಸಿರಾಗಿರುತ್ತವೆ. ಮೇಲಿನ ಪ್ರಬಂಧದಲ್ಲಿ ಪ್ರಬಂಧಕಾರರು ತಮ್ಮ ಅಣ್ಣನ ಬಗ್ಗೆ ಪಡುವ ಅನುಮಾನದ ಜೊತೆ ಆ ಹುಡುಗಿಯಂಥವಳು ಅತ್ತಿಗೆಯಾಗಿ ಬರಬಾರದಿತ್ತೇ ಎಂಬ ಮಾತಿನಲ್ಲಿ ಅಡಗಿರುವ ನೆನಪು ತಿಳಿಯುತ್ತದೆ. ಇಲ್ಲಿ ಲೇಖಕರು ಪಡುವ ಅನುಮಾನ ಲೈಂಗಿಕ ದೃಷ್ಟಿಯದಲ್ಲ. ಅದು ಮಾನವ ಹೃದಯಗಳ ಸಂಬಂಧದ 'ಮಾನವೀಯತೆ' ಸಂಕೇತ. ಏಕೆಂದರೆ ಅಣ್ಣನ ಹೆಂಡತಿಯಾಗಿ ಅತ್ತಿಗೆ ಇದ್ದರೂ 'ಮೃದು' ಎನ್ನಬಹುದಾದ ಆ ಹುಡುಗಿಯ ಸ್ವಭಾವ, ಇವೆಲ್ಲವನ್ನೂ ಅತ್ತಿಗೆಯ ರೂಪದಲ್ಲಿ ನೆನಪಿಸಿಕೊಳ್ಳುವಂತೆ ಮಾಡುತ್ತದೆ. ಹಾಗೆಯೇ ಒಮ್ಮೆ ಕಂಡು ಮರೆಯಾದ ಆ ಅಜ್ಞಾತ ಹುಡುಗಿಯ ಸೌಂದರ್ಯವನ್ನು ವರ್ಣಿಸುವ ಮಾತುಗಳು ನಿರ್ಮಲವಾಗಿವೆ.

ಸಣ್ಣಗುಡ್ಡಯ್ಯನವರ 'ಗುಡ್ಡದ ತಿಮ್ಮಪ್ಪ' ಪ್ರಬಂಧ ಸಂಕಲನದಲ್ಲಿ ತಿರುಪತಿ ತಿಮ್ಮಪ್ಪನೇ ಇಲ್ಲಿ ಬಂದು ನೆಲೆಸಿದ್ದಾನೆ ಎಂದುಕೊಂಡು ಅವನಿಗೆ ವಿವಿಧ ಪೂಜೆ, ಅಭಿಷೇಕಗಳನ್ನು ಮಾಡಿಸುವ ಮತ್ತು 'ಚೌಲ' ತೆಗೆಯುವ ವಿಧಿಕರ್ಮಗಳ ಕುರಿತು ವಿವರವಾಗಿ ಚರ್ಚಿಸುತ್ತಾರೆ. ಆ ಬೆಟ್ಟದ ಸುತ್ತ ಇರುವ ನಿಸರ್ಗದತ್ತವಾದ ವರ್ಣನೆಯನ್ನು ಮನೋಜ್ಞವಾಗಿ ಚಿತ್ರಿಸುತ್ತಾರೆ. ದೇವರ ನಂಬಿಕೆಯಿಂದ ಮಾನವರ ಬದುಕಿನಲ್ಲಿ ಬರುವ ಚೈತನ್ಯವನ್ನು ಅವರು ಚಿತ್ರಿಸುತ್ತಾರೆ. ಪ್ರಕೃತಿದತ್ತವಾದ ಬೇರೆ ಬೇರೆ ಗಿಡಮರಗಳ ವರ್ಣನೆ, ಹಣ್ಣಿನ ಗಿಡಗಳ ವರ್ಣನೆ ಮತ್ತು ಜನೋಪಯೋಗಿಯ ನೆಲೆಯಲ್ಲಿ ಹೇಗೆ ಸಹಾಯಕವಾಗಬಲ್ಲವು ಎನ್ನುವುದನ್ನು ಕುರಿತು ಸಹ ಚರ್ಚಿಸುತ್ತಾರೆ.

ಪ್ರಕೃತಿಯಲ್ಲಿ ಸಿಗುವ ವಿವಿಧ ಹಣ್ಣುಗಳನ್ನು ಕುರಿತಾಗಿ ಮಾತಾನಾಡುವಾಗ ಅದರ ರುಚಿ ಮತ್ತು ಜನರು ಅವುಗಳನ್ನು ತಿಂದು ರುಚಿ ನೋಡಿ ಅದರ ಸವಿಯನ್ನು ಮತ್ತೆ ಸವಿಯಬೇಕೆಂಬ ಹಂಬಲದಿಂದ ಅವುಗಳನ್ನು ಮನೆಗೆ ಒಯ್ಯುವುದು, ವಿವಿಧ ಮರಗಳನ್ನು ನೋಡುವುದರ ಜೊತೆಗೆ ಪ್ರಕೃತಿಗೂ ಮಾನವ ನಿಗೂ ಇರುವ ಅಂತರ್ -ಸಂಬಂಧದ ಕುರಿತು ಪ್ರಬಂಧಕಾರರು ಆಲೋಚಿಸುವುದು ಗಮನಾರ್ಹವಾಗಿದೆ.

ಸಣ್ಣಗುಡ್ಡಯ್ಯನವರು ತಮ್ಮ ಬಾಲ್ಯದ ನೆನಪುಗಳನ್ನು ಕುರಿತು ಅವಲೋಕಿಸುವ ಸಂದರ್ಭದಲ್ಲಿ ಅವರು ಮತ್ತೆ ಮತ್ತೆ ನೆನಪು ಮಾಡಿಕೊಳ್ಳುವುದು 'ಗುಡ್ಡದ ತಿಮ್ಮಪ್ಪ'ನ್ನು. ಲೇಖಕರಿಗೆ ಆ ಗುಡ್ಡದ ಬಗ್ಗೆ ಇರುವ ಒಂದು ಇತಿಹಾಸ ಪ್ರಧಾನವಾದ ಕಲ್ಪನೆಗಿಂತ 'ಗುಡ್ಡದ ತಿಮ್ಮಪ್ಪ'ನಿಗೆ ನಡೆದುಕೊಳ್ಳುತ್ತಿದ್ದ ಊರೊಟ್ಟಿಗಿನ ಸಂಬಂಧಗಳ ಹಿನ್ನೆಲೆಯಲ್ಲಿ ಪೃಥಕ್ಕರಿಸಿ ನೋಡುವುದು ಮುಖ್ಯವಾಗಿದೆ.

ಬಾಲ್ಯದಲ್ಲಿ ಕಂಡುಂಡ ಅನುಭವಗಳು ಅನಂತರದ ಕಾಲದಲ್ಲಿ ಬಂದು ಬುದ್ಧಿಪೂರ್ವಕವಾದ ಅಲೋಚನೆಯಲ್ಲಿ ಮೈ ಪಡೆಯುತ್ತವೆ. ಆಗ ಇತಿಹಾಸವನ್ನು ಬಾಲ್ಯದ ಸಂಬಂಧದ ಒಡನಾಟದಿಂದ ಭಿನ್ನವಾಗಿ ನೋಡಲು ಸಾಧ್ಯವಾಗುತ್ತದೆ. ಪ್ರಬಂಧಕಾರರು ಚಿಕ್ಕ ವಯಸ್ಸಿನವರಾಗಿದ್ದಾಗ ದೇವರಿಗೆ ಮೀಸಲು ಬಿಟ್ಟ ಮುಡಿಯನ್ನು ಜವಳ(ಚೌಲ) ಮಾಡಿಸುವ ಕುರಿತಾಗಿ ಬರುವ ವಿವರಗಳು ಪ್ರಬಂಧದಲ್ಲಿ ವಿನೋದದಿಂದ ಕೂಡಿವೆ.

ಸಣ್ಣಗುಡ್ಡಯ್ಯನವರು ತಮ್ಮ ಪ್ರಬಂಧಗಳಲ್ಲಿ ಅನುಭವ ಮತ್ತು ವಿಚಾರ ಈ ಎರಡು ಲೋಕಗಳನ್ನು ಮತ್ತೆ ಮತ್ತೆ ತರುತ್ತಾರೆ. ಅನುಭವ ಲೋಕದ ಆಧಾರದಲ್ಲಿ ವಿಚಾರವನ್ನು ಬಳಸುವ ಮತ್ತು ವೈಚಾರಿಕ ನೋಟದಲ್ಲಿ ಅನುಭವ ಲೋಕವನ್ನು ನೋಡುವ ವಿಧಾನವು ಅವರ ಪ್ರಬಂಧಗಳಲ್ಲಿ ಅಳವಡಿಕೆಯಾಗಿದೆ. ಅವರ ಪ್ರಬಂಧಗಳಲ್ಲಿ ಬೇರೆ ಬೇರೆ ವಯಸ್ಸಿನಲ್ಲಿ ಪಡೆದ ಅನುಭವಗಳು ಬರುತ್ತವೆ. ಆದರೂ ಅತಿ ಹೆಚ್ಚು ಬರುವುದು ಬಾಲ್ಯದ ಲೋಕವೇ. ಬಾಲ್ಯದ ಅನುಭವವು ಯಾವಾಗಲೂ ಆಪ್ತವಾದ ರೀತಿಯಲ್ಲಿ ಮಂಡನೆಯಾಗುತ್ತದೆ. ಇದಕ್ಕೆ ಕಾರಣ ಅದು ವಯಸ್ಕ ಸ್ಥಿತಿಯಲ್ಲಿ ನೆನಪುಗೊಳ್ಳುತ್ತಿರುವುದೇ ಆಗಿದೆ. ಕನ್ನಡದ ಮಹತ್ವದ ಪ್ರಬಂಧಕಾರರಲ್ಲಿ ಬ್ಯಾಲದ ಲೋಕವು ಬಹಳ ಮುಖ್ಯವಾದ ನೆನಪುಗಳಾಗಿ ಅಭಿವ್ಯಕ್ತಿಯಾಗುವುದನ್ನು ಗಮನಿಸಬಹುದು. ರಾ.ಕು., ಎ.ಎನ್.ಮೂರ್ತಿರಾವ್, ಗೊರೂರು, ವಿ.ಸೀ. ಮುಂತಾದವರಲ್ಲಿ ಇದನ್ನು ನೋಡಬಹುದು. ರಾ.ಕು ಅವರ ಗಾಳಿಪಟ ಪ್ರಬಂಧವು ಈ ದೆಸೆಯಲ್ಲಿ ಒಂದು ಅಪರೂಪದ ನಿದರ್ಶನವಾಗಿದೆ. ಸಣ್ಣಗುಡ್ಡಯ್ಯನವರ ವಿಶೇಷತೆಯೆಂದರೆ ಬಾಲ್ಯದ ಅನುಭವಗಳ ಲೋಕದಲ್ಲಿ ಮೈಮರೆತು ವರ್ತಮಾನದ ಬದುಕನ್ನು ಅಲ್ಲಗಳೆಯದೇ ಇರುವುದು. ಈ ಗುಣವು ಅವರ ಚಿಂತನೆಯ ಆರೋಗ್ಯವನ್ನು ಸೂಚಿಸುತ್ತದೆ.

## ೨.೪. ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ಪ್ರಕೃತಿ ವರ್ಣನೆ

ಸಣ್ಣಗುಡ್ಡಯ್ಯನವರ ಬಹುತೇಕ ಪ್ರಬಂಧಗಳಲ್ಲಿ ಗ್ರಾಮೀಣ ಜೀವನ ಚಿತ್ರವಿದೆ. ಗ್ರಾಮ ಪರಿಸರದಲ್ಲಿ ಇವರ ಪ್ರಕೃತಿಯ ಚಿತ್ರಣವೂ ಅವರ ಪ್ರಬಂಧಗಳಲ್ಲಿ ಇದೆ. ಇಲ್ಲಿ ಪ್ರಕೃತಿ ಚಿತ್ರಣವೆಂದರೆ ಹಕ್ಕಿ ಪಕ್ಷಿಗಳು, ಗಾಳಿ ಬೆಳಕು, ಗುಡ್ಡಬೆಟ್ಟ, ಬೆಳಂದಿಂಗಳು, ಸಾಕು ಪ್ರಾಣಿಗಳು ಇತ್ಯಾದಿ ಕುರಿತ ವರ್ಣನೆಗಳು. ಇದಕ್ಕೆ 'ಗಾಳಿ ಬೆಳಕು ಬಿಸಿಲು ಮುಂತಾಗಿ', 'ಒಂದು ಬೇಸಿಗೆಯ ದಿನ', 'ಗುಡ್ಡದ ತಿಮ್ಮಪ್ಪ' ಮುಂತಾದ ಪ್ರಬಂಧಗಳು ಸಾಕ್ಷಿಯಾಗಿವೆ. ಸಣ್ಣಗುಡ್ಡಯ್ಯನವರ ಪ್ರಬಂಧಗಳಲ್ಲಿ ಬರುವ ಪ್ರಕೃತಿಯ ಚಿತ್ರಣದ ವಿಶೇಷವೆಂದರೆ, ಅದು ಮನುಷ್ಯನ ಬದುಕಿನ ಭಾಗವಾಗಿ ಬೆರೆತು ಹೋಗುವುದು. ನವೋದಯ ಮನೋಧರ್ಮದ ಲೇಖಕರಾದರೂ ಸಣ್ಣಗುಡ್ಡಯ್ಯನವರು ಶುದ್ಧ ಪ್ರಕೃತಿಯ ವರ್ಣನೆಗಳನ್ನು ಮಾಡುವುದರಲ್ಲಿ ತನ್ಮಯತೆ ತೋರುವುದಿಲ್ಲ. ಪ್ರಕೃತಿಯ ಜೊತೆಗೆ ಮಾನವರ ಬದುಕನ್ನು ಹೊಂದಾಣಿಕೆ

ಮಾಡಿ ನೋಡುವುದು ಅವರ ವಿಶೇಷತೆಯಾಗಿದೆ. ಇದಕ್ಕೆ ಕಾರಣ ಲೇಖಕರ ಜೀವನ ಪ್ರೀತಿ ಮತ್ತು ಸಾಮಾಜಿಕ ಕಳಕಳಿ ಎಂದು ಹೇಳಬಹುದು. ಹೀಗಾಗಿ ಸಣ್ಣಗುಡ್ಡಯ್ಯನವರ ಪ್ರಬಂಧಗಳನ್ನು ಪ್ರಕೃತಿ ಚಿತ್ರಣದ ಸೌಂದರ್ಯಾತ್ಮಕತೆಯೂ ಮತ್ತು ಮನುಷ್ಯ ಬಾಳಿನ ದಾರ್ಶನಿಕತೆಯೂ ಒಟ್ಟೊಟ್ಟಿಗೆ ಹರಿಯುತ್ತವೆ.

'ಒಂದು ಬೇಸಿಗೆಯ ದಿನ' ಪ್ರಬಂಧವು ಇಂಗ್ಲೀಷ್‌ನ ಪ್ರಸಿದ್ಧ ಕವಿಗಳಲ್ಲಿ ಒಬ್ಬನಾದ ಕೋಲ್ ರಿಡ್ಜ್‌ನ ಒಂದು ಹೇಳಿಕೆಯಿಂದ ಆರಂಭವಾಗುವುದು ಗಮನಾರ್ಹ. ಕೋಲ್‌ರಿಡ್ಜ್‌ನ ಈ ಹೇಳಿಕೆಯು ನಿಸರ್ಗ ಮತ್ತು ಮಾನವ ಬದುಕಿನ ಅಂತರ ಸಂಬಂಧವನ್ನು ವಿಶ್ಲೇಷಿಸುತ್ತದೆ. ಪ್ರಬಂಧವು ಯುಗಾದಿಯ ಹೊತ್ತಿನ ಪ್ರಕೃತಿಯ ಚಿತ್ರಣದ ಮೂಲಕ ಆರಂಭವಾಗುತ್ತದೆ. ಬೇವು, ಹೊಂಗೆ ಹಾಗೂ ಹಿಪ್ಪೆ ಮರಗಳಲ್ಲಿ ಹೂವು ತುಂಬಿ ನಿಂತಿರುವುದನ್ನು ಈ ಚಿತ್ರವು ಬಣ್ಣಿಸುತ್ತದೆ. ಆದರೆ ಈ ಚಿತ್ರವು ಕೇವಲ ಮರದಿಂದ ಸುರಿದಿರುವ ಹೂವಿನ ವರ್ಣನೆಗೆ ನಿಲ್ಲುವುದಿಲ್ಲ. ಆ ಹೂಗಳನ್ನು ತಿನ್ನುವ ಮೇಕೆ ಮತ್ತು ಮರದಡಿ ಮಲಗಿರುವ ದನಗಳೂ ಅಲ್ಲಿ ಬರುತ್ತವೆ. ಕೇವಲ ಸೌಂದರ್ಯ ಲೋಲುಪ ಆಗಬಹುದಾದ ನಿಸರ್ಗದ ಚಿತ್ರದೊಳಗೆ ಮನುಷ್ಯ ಅಥವಾ ಪ್ರಾಣಿ ಜೀವನದ ಇನ್ನೊಂದು ಚಿತ್ರಣವನ್ನು ಕೂಡಿಸಿ ನೋಡುವ ಸಣ್ಣಗುಡ್ಡಯ್ಯನವರ ಎಂದಿನ ಧೋರಣೆಗೆ ಈ ಚಿತ್ರ ಕೂಡಾ ಸಾಕ್ಷಿಯಾಗಿದೆ. ಸುಡುವ ಬಿಸಿಲಿನಲ್ಲಿ ನಿಂತಿರುವ ಮರವು ಹೊಲದ ಅಂಚಿಗೆ ಹೂ ಹಿಡಿದು ನಿಂತಿರುವ ತೇರಿನಂತೆ ಎಂದು ಹೋಲಿಸುತ್ತಾರೆ. ಬಸಿರಿ ಮರವನ್ನು ಬಿಸಿಲನ್ನು ಧಿಕ್ಕರಿಸಿ ಹಿಡಿದ ಬೃಹದಾಕಾರದ ಛತ್ರಿಯಂತೆ ಎಂದು ಹೇಳುತ್ತಾರೆ. ಹಳದಿ ಬಣ್ಣದ ಹೂನಿಂದ ಮುಚ್ಚಿ ಹೋಗಿರುವ ಕಕ್ಕೆ ಮರವನ್ನು ಅಲಂಕಾರಗೊಂಡು ಕುಳಿತಿರುವ ಅಧ್ಯಕ್ಷನಂತೆ ಎಂದು ಹೇಳುತ್ತಾರೆ. ಇವೆಲ್ಲವೂ ಸುಡುವ ಬೇಸಿಗೆಯ ಬಿಸಿಲಿನಲ್ಲಿ ಬರುವ ನಿಸರ್ಗದ ಚಿತ್ರಗಳು. ಈ ಚಿತ್ರಗಳ ಬಳಿಕ ದಟ್ಟವಾದ ಮನುಷ್ಯ ಬದುಕಿನ ವಿವರಗಳು ಬರುತ್ತವೆ. ಅವೆಂದರೆ ಕೆರೆಯಲ್ಲಿ ಈಜಾಡುವ ಹುಡುಗರು, ಬಟ್ಟೆ ಒಗೆಯುವ ಹೆಂಗಸರು ಇತ್ಯಾದಿ. ಬೇಸಿಗೆಯಲ್ಲಿ ಕೆಲಸವೆಲ್ಲಾ ಮುಗಿದು ವಿಶ್ರಾಂತಿಯ ಸ್ಥಿತಿಗೆ ಬಂದಿರುವ ಒಂದು ಜನ ಸಮುದಾಯದ ಚಿತ್ರ ಈ ಪ್ರಬಂಧದಲ್ಲಿದೆ. ಇದನ್ನು ಅವರು ಅವಸರದ ಬದುಕಿನಲ್ಲಿ ಸಿಗುವ ರಜಾ ಕಾಲದ ನಿರುದ್ವಿಗ್ನತೆ ಎಂದು ಕರೆಯುತ್ತಾರೆ. ಸೂರ್ಯನ ಬಿಸಿಲು ಇಳಿಮುಖವಾಗಿ ವಾತಾವರಣ ತಂಪಾದ ಕೂಡಲೇ ಊರ ಮುಂದಿನ ಅರಳಿ ಮತ್ತು ಬೇವಿನ ಮರಗಳ ನೆರಳನ್ನು ಆಶ್ರಯಿಸಿ ವಿಶ್ರಾಂತಿ ತೆಗೆದುಕೊಳ್ಳುವ ಜನರ ಚಿತ್ರಣಗಳು ಬರುತ್ತವೆ. ಇಂಥ ಸಂಜೆಯನ್ನು ಪ್ರಬಂಧಕಾರರು ಹೀಗೆ ವರ್ಣಿಸುತ್ತಾರೆ.

''ಮೋಡವಿಲ್ಲದ ಆಕಾಶ, ಇದ್ದರೂ ಬಿಳಿಯ ಬಂಜೆ ಮೋಡಗಳು. ಯಾವುದೋ ಹುಣಸೆಮರದ ಟೊಳ್ಳಿನಲ್ಲಿ ಸೆರೆಯಾಗಿದ್ದ ಗಾಳಿ ಈಗ ಪ್ರಾಣಭಯವನ್ನು ಬಿಟ್ಟು ಈಚೆಗೆ ಬರುತ್ತದೆ. ಸ್ವಾತಂತ್ರ್ಯದ ಉಸಿರಾಡುತ್ತದೆ. ನಿಮಿಷ ನಿಮಿಷಕ್ಕೆ ಅದರ ಉಷ್ಣತ್ವ ತಗ್ಗಿ ಅಪ್ಯಾಯಮಾನವಾಗಿರುತ್ತದೆ. ಜನರು ನೂಕಿ

ಬಲಾತ್ಕಾರಿಸಿದರೂ ಮನೆಯೊಳಕ್ಕೆ ಹೋಗರು. ಅಡುಗೆಯ ಕೈಂಕರ್ಯಕಕ್ಕೆ ಬದ್ಧರಾದ ನಮ್ಮ ಹಳ್ಳಿಯ ಹೆಣ್ಣು ಜೀವಿಗಳಷ್ಟೇ ಈ ಬಯಲಿನ ತಂಪುಗಾಳಿಯಿಂದ ವಂಚಿತರಾಗುತ್ತಾರೆ. ನಡುನಡುವೆ ಒಂದು ನಿಮಿಷ ಬಿಡುವ ಮಾಡಿಕೊಂಡು ಅವರು ಹೊರಗೆ ಬಂದು ಒಂದೊಂದು ಗುಟುಕು ತಂಗಾಳಿಯನ್ನು ಸೇವಿಸಿ ಒಳಕ್ಕೆ ಹೋಗಬೇಕು."[೫]

ಪ್ರಬಂಧದ ಮೊದಲನೆ ಭಾಗದಲ್ಲಿ ಸುಡುವ ಹಗಲಿನಲ್ಲಿ ಕಾಣುವ ಪ್ರಕೃತಿ ಮತ್ತು ಮನುಷ್ಯ ಚಿತ್ರಣಗಳು ಬಂದರೆ, ಎರಡನೇ ಭಾಗದಲ್ಲಿ ರಾತ್ರಿಯ ಬೆಳದಿಂಗಳು ಮತ್ತು ಮನುಷ್ಯರ ಚಿತ್ರಣಗಳು ಬರುತ್ತವೆ. ಮನೆಯ ಉಪ್ಪರಿಗೆಯ ಮೇಲೆ ಬೆಳದಿಂಗಳನ್ನು ಆಸ್ವಾದಿಸುತ್ತಾ ಮಕ್ಕಳು, ಹಿರಿಯರು ತಮ್ಮ ಸೃಜನಶೀಲತೆಯನ್ನು ಕಥೆ ಹೇಳುವ, ಹಾಡು ಹೇಳುವ, ಆಟವಾಡುವ ಚಟುವಟಿಕೆಗಳ ಮೂಲಕ ಪ್ರಕಟಿಸುವುದನ್ನು ಕಾಣುತ್ತೇವೆ. ನಡುರಾತ್ರಿಗೆ ಅಗಸದಲ್ಲಿ ಹೊಳೆಯುವ ನಕ್ಷತ್ರ ಪುಂಜಗಳನ್ನು ನೋಡುತ್ತಾ ಪ್ರಬಂಧಕಾರರು ಬ್ರಹ್ಮಾಂಡದ ರಚನೆಗೆ ವಿಸ್ಮಯ ತೋರುತ್ತಾರೆ. "ನಿಮಿಷ ನಿಮಿಷಕ್ಕೆ ಹಗಲು ಕಾಯ್ದ ನೆಲ ಗಾಳಿಗಳು ಆರುತ್ತಾರುತ್ತ ಹೆಚ್ಚು ಹೆಚ್ಚು ತಂಪಾಗುತ್ತದೆ. ಎಲ್ಲರೂ ನಿದ್ದೆಯಲ್ಲಿ ಮುಳುಗಿದರೂ ನನಗೆ ನಿದ್ದೆ ಬರುತ್ತಿಲ್ಲ. ನಕ್ಷತ್ರ ಪುಂಜಗಳನ್ನು ಗುರುತಿಸುತ್ತ ಅವುಗಳಿಗೆ ಕೊಟ್ಟ ಹೆಸರುಗಳನ್ನು ನೆನಪಿಸಿಕೊಳ್ಳುತ್ತ ಬಿಡುಗಣ್ಣ ದೇವತೆಯಂತೆ ಆಕಾಶವನ್ನು ಅಳೆದು ಅಂದಾಜು ಮಾಡುತ್ತಿದ್ದೇನೆ. ಅದರ ಅಗಾಧತೆಗೆ, ಔನ್ನತ್ಯಕ್ಕೆ, ಅದರ ಗಹನತೆಗೆ ವಿಸ್ಮಯ ಪಡುತ್ತೇನೆ. ಅದನ್ನೆಲ್ಲ ನೋಡುವ ನೆನೆಯುವ ಅಳೆಯುವ ಅನುಭವಿಸುವ ಕಣ್ಣುಗಳ ಕೇಂದ್ರ, ಕ್ಯಾಮರಾದ ಕಣ್ಣಿನಂತೆ, ಈ ದಿವ್ಯ ದೃಶ್ಯ ವೈಭವಕ್ಕೆ ಮೂಲಬಿಂದುವೆಂಬುದನ್ನು ನೆನೆಯುತ್ತ ನೆನೆಯುತ್ತ, ನಾನು ಈ ಪ್ರಕೃತಿಯನ್ನು ಈ ವಿಶ್ವದ ಒಂದು ಅವಿಭಾಜ್ಯ ಅಂಶ ಎನಿಸಿ ಪುಳಕ ಉಂಟಾಗುತ್ತದೆ."[೬]

ಹೀಗೆ ಪ್ರಬಂಧವು ಒಂದು ಮಧ್ಯಾಹ್ನದಿಂದ ಆರಂಭವಾಗಿ ಹಗಲು ಕಳೆದು ರಾತ್ರಿ ಮುಗಿದು ಬೆಳಕು ಹರಿಯುವ ತನಕದ ಒಂದು ದಿನದ ಚಿತ್ರಣಗಳನ್ನು ಒಳಗೊಂಡಿದೆ. ಬೆಳಕು ಹರಿಯುವುದನ್ನು ಪ್ರಬಂಧಕಾರರು ಹೀಗೆ ವರ್ಣಿಸುತ್ತಾರೆ. "ಬೆಳ್ಳಿ ಮೂಡುವ ಹೊತ್ತಿಗೆ, ನೆತ್ತಿಯಲ್ಲಿದ್ದ ನಕ್ಷತ್ರ ಪುಂಜಗಳೆಲ್ಲ ಪಶ್ಚಿಮಕ್ಕೆ, ವಾಯುವ್ಯಕ್ಕೆ ಇಳಿಯುವ ಹೊತ್ತಿನಲ್ಲಿ ಪ್ರಕೃತಿಯ ಬಿಸುಪೆಲ್ಲ ಮಾಯವಾಗಿ ಗಾಳಿ ತಣ್ಣಗೆ ತೀಡಿದಾಗಷ್ಟೆ ಮೈಮೇಲಕ್ಕೆ ಹೊದಿಕೆ ಎಳೆದುಕೊಳ್ಳಬೇಕೆನಿಸುತ್ತದೆ. ಹೊದ್ದು ಮಲಗುವುದು ಎಂದರೆ ಎಷ್ಟೊಂದು ಸುಖದಾಯಕ ಎಂಬುದು ತಿಳಿಯುವುದು ಆಗಲೇ."[೭]

"ಆಕಸ್ಮಿಕವಾಗಿ ಒಮ್ಮೆ ಮುಂಜೆ ಎದ್ದುನಿಂತು ಪೂರ್ವ ದಿಕ್ಕಿಗೆ ಕಣ್ಣು ಹಾಯಿಸುವುದು ಅದೆಂಥ ಅನುಭವ! ಮಾರ್ಮಿಕ ಸಂದರ್ಭದಲ್ಲಿ ಸಿಕ್ಕಿ ಬಿದ್ದು ವಿಪರೀತವಾಗಿ ನಾಚಿದ ಕಪ್ಪು ಹೆಣ್ಣಿನ ಕೆನ್ನೆಗಳು ಕೂಡ ಎಷ್ಟು ಕೆಂಪಾಗುತ್ತವೆ ಎಂಬುದನ್ನು ತಿಳಿಯದವನಿಗೆ ಮಾನವ ಸಂವೇದನೆಗಳೇ ತಿಳಿದಿಲ್ಲ ಎನ್ನಬೇಕು. ಅವಳ ಅಷ್ಟಗಲ ಮುಖಕ್ಕೆ ಒಂದು ಬೆಳ್ಳಿ ಚುಕ್ಕೆಯನ್ನು ಸೂಡಿಬಿಟ್ಟರೆ! ಅಬ್ಬ, ಬಟ್ಟ

ಬಯಲನ್ನು ಕಂಡು ಹೆಣ್ಣಿನ ಮುಖ ನೆನಪಾಗುವುದು ಎಂದರೆ ಅವಳನ್ನು ಆದಿಶಕ್ತಿ ಎನ್ನಬೇಕೋ? ಅನಾದಿಶಕ್ತಿ ಎನ್ನಬೇಕೋ?''[೮]

ಈ ಪ್ರಬಂಧದಲ್ಲಿ ಉದ್ದಕ್ಕೂ ಕಂಡುಬರುವುದು ಇಂಥ ಮನೋಹರ ಪ್ರಕೃತಿ ಚಿತ್ರಗಳೇ. ಕನ್ನಡ ಗದ್ಯಕ್ಕೆ ಎಂಥ ಅಪೂರ್ವ ಚಿತ್ರಕ ಶಕ್ತಿ ಇರಬಹುದು ಎಂಬುದರ ಕಲ್ಪನೆ ಇದರಿಂದ ನಮಗಾಗುತ್ತದೆ. ಹೀಗೆ ಒಂದು ಸಾಮಾನ್ಯ ದಿನಚರಿಯ ಸಾಮಾನ್ಯ ಮಾಹಿತಿಗಳನ್ನು ಇಟ್ಟುಕೊಂಡು ಬಿಸಿಲು ಚಂದ್ರನ ಬೆಳಕು ಮತ್ತು ನಕ್ಷತ್ರಗಳ ಬೆಳಕುಗಳ ಬಗ್ಗೆ ಆಪ್ತವಾಗಿ ಪ್ರಬಂಧವು ಚಿಂತನೆ ನಡೆಸುತ್ತದೆ. ಆಕಾಶದಿಂದ ಬರುವ ಈ ಮೂರು ಆಕಾಶಕಾಯಗಳ (ಸೂರ್ಯ, ಚಂದ್ರ, ನಕ್ಷತ್ರ) ಬೆಳಕಿನಲ್ಲಿ ಲೋಕದ ಬದುಕು ಬೇರೆ ಬೇರೆ ರೂಪದಲ್ಲಿ ಕಾಣುತ್ತದೆ. ಇಡೀ ಪ್ರಬಂಧದಲ್ಲಿ ಪ್ರಕೃತಿ ಮೂಲಕ ಮಾನವ ಬದುಕನ್ನು ಮತ್ತು ಮಾನವ ಬದುಕಿನ ಮೂಲಕ ಪ್ರಕೃತಿಯ ಬದುಕನ್ನು ನೋಡುವ ಅಂತರ್ ದೃಷ್ಟಿಕೋನಗಳ ವಿಧಾನವನ್ನು ಸಣ್ಣಗುಡ್ಡಯ್ಯನವರು ಅದ್ಭುತವಾಗಿ ಬಳಸುತ್ತಾರೆ. ಇದಕ್ಕೆ ಪೂರಕವಾಗಿ 'ಒಂದು ಬೇಸಿಗೆಯ ದಿನ' ಪ್ರಬಂಧಕ್ಕೆ ಪ್ರಬಂಧಕಾರರ ಮಿತ್ರರೂ, ಕವಿಯೂ ಆದ ವೀಚಿಯವರು ಹೇಳಿರುವ ಒಂದು ಮಾತನ್ನು ಸೇರಿಸಬಹುದು- ''ಒಂದು ಬೇಸಿಗೆಯ ದಿನ'' ನೆಪ ಮಾತ್ರಕ್ಕೆ ಪ್ರಬಂಧವೆನ್ನಬೇಕೇನೊ! ಅದರ ಪ್ರತಿಪಾದನೆಯ ಕ್ರಮವೆಲ್ಲ ಉತ್ಕೃಷ್ಟ ಕಾವ್ಯದ್ದು...''[೯]

ಸಣ್ಣಗುಡ್ಡಯ್ಯನವರ ಪ್ರಬಂಧದಲ್ಲಿ ನಿಸರ್ಗ ನಮಗೆ ಉದಾರವಾಗಿ ಕರುಣಿಸಿರುವಂಥ ಜೀವಾಧಾರವೂ, ಜೀವ ಪೋಷಕವೂ ಆಗಿರುವ ವಸ್ತುಗಳೆಂದರೆ ಗಾಳಿ, ಬೆಳಕು, ಬಿಸಿಲು, ನೀರು ಮುಂತಾದವು. ಅವು ಶುದ್ಧರೂಪದಲ್ಲಿ ಈಚಿನ ದಿನಗಳಲ್ಲಿ ಜನರಿಗೆ ದುರ್ಲಭವಾಗುತ್ತಿರುವುದು ಕಂಡುಬರುತ್ತದೆ. ಅವುಗಳ ಪರಮ ಪ್ರಯೋಜನ ಪಡೆಯಲೂ ಆಗದಷ್ಟು ಮಟ್ಟಿಗೆ ನಾಗರಿಕತೆಯ ದಾಳಿ ಆಗುತ್ತಿದೆ. ನಾಗರಿಕ ಸೌಲಭ್ಯಗಳನ್ನು ಗಳಿಸಿಕೊಳ್ಳುವುದನ್ನೇ ಗೀಳಾಗಿಸಿಕೊಂಡು, ಅದನ್ನೆ ಪರಮಗಂತ್ಯವೆಂದು ತಿಳಿದು ತನ್ನ ಸುತ್ತಣ ಪರಿಸರವನ್ನು ಮಲೀನಗೊಳಿಸುತ್ತಿರುವ ಮನುಷ್ಯರ ಆತ್ಮ ಘಾತುಕ ಪ್ರವೃತ್ತಿ ನಮ್ಮ ಕಣ್ಣಮುಂದೆ ತಟಸ್ಥವಾಗಿರುವುದನ್ನು ನೋಡುತ್ತೇವೆ. ಇಂಥ ಔದಾಸೀನ್ಯ, ತಪ್ಪುಕಲ್ಪನೆಗಳು, ಮೌಢ್ಯ ಇವನ್ನೆಲ್ಲ ಹೇಳುತ್ತಲೇ ವಿಚಾರದ ಗಾಳಿ, ಬೆಳಕು, ಬಿಸಿಲುಗಳನ್ನು, ಸಮೀಪಕ್ಕೂ ಬಿಟ್ಟು ಕೊಳ್ಳದೆ, ತಮ್ಮ ವಿಷ ಸದೃಶವರ್ತನೆಯಿಂದ ಜನ ಮಾನಸವನ್ನು ಹಾಗೂ ಲೋಕದ ಪರಿಸರವನ್ನು ಮಲೀನಗೊಳಿಸುತ್ತಿರುವ ಜನಗಳನ್ನು ಕುರಿತು ಪ್ರಬಂಧಕಾರರು 'ಗಾಳಿ, ಬೆಳಕು, ಬಿಸಿಲು' ಎಂಬ ಪ್ರಬಂಧದಲ್ಲಿ ಚರ್ಚಿಸುತ್ತಾರೆ.

ಹಾಗಾಗಿ ನಿಸರ್ಗದ ಬಗೆಗಿನ ನಮ್ಮ ಅರಿವು ಮತ್ತು ಸಂವೇದನೆಗಳನ್ನು ಹೆಚ್ಚಿಸುತ್ತಲೇ ನಮ್ಮ ಸಾಮಾಜಿಕ ಬದುಕಿನ ಒಂದು ಅವಿಭಾಜ್ಯ ಅಂಗವಾಗಿರುವ ಮತಧರ್ಮಗಳ ವಿಷಯಕ್ಕೆ ಸಂಬಂಧಿಸಿದಂತೆ ವೈಚಾರಿಕ ಒಳನೋಟಗಳನ್ನು ನೀಡುವ ಸಾರ್ಥಕ ಪ್ರಯತ್ನವೂ ಈ ಪ್ರಬಂಧದಲ್ಲಿದೆ.

ಪ್ರಕೃತಿಯ ಮುಕ್ತ ವಾತಾವರಣ ಹೇಗೆ ಆರೋಗ್ಯಕಾರಿಯೋ, ಅದೇ ರೀತಿ ಜನರ ಮಧ್ಯ ಪ್ರತ್ಯೇಕತೆಯ ಗೋಡೆಗಳನ್ನು ನಿರ್ಮಿಸಿ, ಅವರ ಮನಸ್ಸುಗಳನ್ನು ಬಂಧಿಸಿಡುವ ಮತ ಧರ್ಮಗಳಿಂದ ಮುಕ್ತವಾದ ವಾತಾವರಣವೇ ಸಮಾಜದ ಸ್ವಾಸ್ಥ್ಯಕ್ಕೆ ಹಿತಕಾರಿಯಾದುದು. ಭೂತದಯೆ, ಪರಾನುಕಂಪೆ, ಮಾನವ ಪ್ರೀತಿ, ತ್ಯಾಗ, ಸ್ನೇಹ ಮೊದಲಾದ ಮಾನವೀಯ ಗುಣಗಳು ಮೊಳೆಯಲು ಇಂಥ ವಾತಾವರಣವೇ ಬೇಕು ಎಂಬುದನ್ನು ಪ್ರಬಂಧಕಾರರು ಮನಗಾಣಿಸುತ್ತಾರೆ. ರಾಮ ಜನ್ಮ ಭೂಮಿ-ಬಾಬರಿ ಮಸೀದಿಯ ವಿವಾದದ ಸಂಬಂಧದಲ್ಲಿ ಆಗ್ರಹ ಪೂರ್ವಕವಾಗಿ ಚರ್ಚಿಸುತ್ತಿದ್ದವರನ್ನು ಪ್ರಸ್ತಾಪಿಸುತ್ತಾ ಹೇಳುವ "ನಾಲ್ಕು ಕಡೆಯಿಂದ ಬೀಸಿ ಬರುವ ಹಿತವಾದ ಗಾಳಿಯನ್ನು ಸ್ವೀಕರಿಸಲಾರದವರು ಇಂತಹ ಶಠರಾಗುತ್ತಾರೆಯೋ" ಎಂಬ ಆಶಂಕೆಯ ಮಾತುಗಳು ಹಾಗೂ "ಬಿಸಿಲು ಬೆಳಕುಗಳು ಹೊಸ ತಿಳಿವಿನ ಮೂಲವಿರಬೇಕು"[೧೦] ಎಂಬ ಉದ್ಗಾರ, ಈ ಪ್ರಬಂಧದ ವೈಚಾರಿಕ ಮೀಮಾಂಸೆಯ ಫಲಿತಗಳಾಗಿವೆ.

ಸಣ್ಣ ಗುಡ್ಡಯ್ಯನವರ 'ಗುಡ್ಡದ ತಿಮ್ಮಪ್ಪ' ಪ್ರಬಂಧದಲ್ಲಿ ಬರುವ ವರ್ಣನೆಯೂ ಬಯಲು ಸೀಮೆಯ ಪರಿಸರದ ವರ್ಣನೆಯೇ ಆಗಿದೆ. ಪ್ರಬಂಧಕಾರರು ದೇವದಾರು ಮರಗಳಲ್ಲಿ ಬಿಟ್ಟ ಹಣ್ಣುಗಳನ್ನು ಹವಳದ ಮಣಿಗಳಿಗೆ ಹೋಲಿಸಿರುವುದು ತುಂಬಾ ಸುಂದರವಾಗಿದೆ. ಹಾಗೆಯೇ ಮನುಷ್ಯನ ಎದೆಯ ಮಟ್ಟಕ್ಕೆ ಅಡಕವಾಗಿ ಬೆಳೆದು ದಟ್ಟ ಶ್ಯಾಮಲ ವರ್ಣದ ಎಲೆಗಳಿಂದ ಕೂಡಿದ ಕಾಡು, ಬಿಕ್ಕೆ ಗಿಡಗಳು, ತೆಳುವಾದ ತೊಗರಿ ಎಲೆಗಳಂಥ ಎಲೆ ಮತ್ತು ನೀಳವಾದ ಶೀರೋಭಾಗದಿಂದ ಶೋಭಿಸುತ್ತಿರುವ ನೆಲ್ಲಿ ಕಾಯಿಗಳನ್ನು ವರ್ಣಿಸುವಾಗ ಲೇಖಕರ ಕಲ್ಪನಾ ವರ್ಣನೆ ತುಂಬಾ ಸುಂದರವೂ ಸೂಕ್ಷ್ಮವೂ ಆಗಿದೆ.

**ಕೊನೆ ಟಿಪ್ಪಣಿಗಳು**

೧. ಎಸ್.ದಿವಾಕರ್, ಏಕಾಂತ ಮತ್ತು ಇತರ ಪ್ರಬಂಧಗಳನ್ನು ಕುರಿತು(೨೩-೯-೧೯೯೫ರಂದು ಬರೆದ ಪತ್ರ)

೨. ಎಚ್.ಜಿ.ಸಣ್ಣಗುಡ್ಡಯ್ಯ, ಹದ್ದು ಮತ್ತು ಇತರ ಪ್ರಬಂಧಗಳು, ಹದ್ದು, ಪು.೨೧

೩. ಎಸ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಏಕಾಂತ, ಪು.೨೦

೪. ರಾ.ಲಕ್ಷ್ಮೀ ನಾರಾಯಣ, ಒಂದು ಸಹೃದಯ ಚಿಂತನೆ, ಪು.೧೨೫

೫. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಒಂದು ಬೇಸಿಗೆಯ ದಿನ ಪು.೮೫

೬. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಒಂದು ಬೇಸಿಗೆಯ ದಿನ ಪು.೮೭

೭. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಒಂದು ಬೇಸಿಗೆಯ ದಿನ ಪು.೮೮

೮. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಒಂದು ಬೇಸಿಗೆಯ ದಿನ ಪು.೮೯

೯. ಕವಿ ವೀಚಿ, ಏಕಾಂತ ಮತ್ತು ಇತರ ಪ್ರಬಂಧಗಳನ್ನು ಕುರಿತು

೧೦. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಗಾಳಿ ಬೆಳಕು ಬಿಸಿಲು ಮುಂತಾಗಿ, ಪು.೧೨೧

# ಅಧ್ಯಾಯ ೩

# ಎಚ್.ಜಿ.ಸಣ್ಣಗುಡ್ಡಯ್ಯನವರ ಕಾವ್ಯದ ಸ್ವರೂಪ

೩.೧. ಪೀಠಿಕೆ

೩.೨. ಎಚ್.ಜಿ. ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ನಿಸರ್ಗಾನುಸಂಧಾನ

೩.೩. ಎಚ್.ಜಿ. ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ವಾಸ್ತವಿಕ ಬದುಕಿನ ಚಿತ್ರಣ

೩.೪. ಎಚ್.ಜಿ. ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ಪ್ರೇಮ

೩

# ಎಚ್.ಜಿ.ಸಣ್ಣಗುಡ್ಡಯ್ಯನವರ ಕಾವ್ಯದ ಸ್ವರೂಪ

## ೩.೧. ಪೀಠಿಕೆ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಹುದೊಡ್ಡ ಸಂಖ್ಯೆಯ ಲೇಖಕರನ್ನು ಸೃಷ್ಟಿಸಿದ್ದು ಬಹುಶಃ ಕಾವ್ಯಪ್ರಕಾರವೆಂದು ಕಾಣುತ್ತದೆ. ಅದರಲ್ಲೂ ನವೋದಯ ಕಾಲಘಟ್ಟದಲ್ಲಿ ಬಹುತೇಕ ಲೇಖಕರು ಕವಿತೆಗಳನ್ನು ಬರೆದವರಾಗಿದ್ದರು. ನವೋದಯ ಕಾಲಘಟ್ಟವು ಸರಿದು ಹೋದ ಬಳಿಕ ಕೂಡ ಅನೇಕ ಅದೇ ರಮ್ಯ ಮನೋಧರ್ಮದಲ್ಲಿ ಕವಿತೆಗಳನ್ನು ಬರೆಯುತ್ತಾ ಹೋದರು. ನವೋದಯ ಸಂಪ್ರದಾಯದ ಗಾಢ ಪ್ರಭಾವಕ್ಕೆ ಸಿಲುಕಿ ಕವಿತೆಗಳನ್ನು ಬರೆಯುತ್ತಾ ಹೋದವರಲ್ಲಿ ಸಣ್ಣಗುಡ್ಡಯ್ಯನವರೂ ಒಬ್ಬರು.

ಸಣ್ಣಗುಡ್ಡಯ್ಯನವರು ಮನೋಧರ್ಮದ ಹಿನ್ನೆಲೆಯಿಂದ ಗುರುತಿಸಬಹುದಾದರೆ 'ನವೋದಯ' ಪಂಥಕ್ಕೆ ಸೇರಿದವರು ಎನ್ನಬಹುದು. ಆದರೆ ಅವರು ಬದುಕಿ ಬರೆದಿದ್ದು ನವ್ಯದ ಕಾಲಘಟ್ಟದಲ್ಲಿ. ಆದರೆ ಸಣ್ಣಗುಡ್ಡಯ್ಯನವರು ಯಾವುದೇ ಪಂಥದಲ್ಲಿ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ. ಯಾವುದೇ ಒಂದು ಪಂಥಕ್ಕೂ ಜೋತು ಬೀಳದೇ ತಾವು ಸ್ಪಂದಿಸಿದ್ದಕ್ಕೆ ಕವಿತೆಗಳ ಮೂಲಕ ರೂಪ ಕೊಟ್ಟವರು.

ಹಾಗೆ ನೋಡಿದರೆ ಸಣ್ಣಗುಡ್ಡಯ್ಯನವರ ಪ್ರಧಾನ ಪ್ರಕಾರ ಕಾವ್ಯವಲ್ಲ. ತಮಗೆ ಲಹರಿ ಬಂದಾಗ ಆಗೊಂದು, ಈಗೊಂದು ಕವಿತೆಯನ್ನು ಅವರು ಬರೆದವರು. ಆದುದರಿಂದ ಅವರ ಸಾಹಿತ್ಯ ಕೃತಿಗಳ ಸಂಖ್ಯೆಯ ಮತ್ತು ಪುಸ್ತಕದ ಗಾತ್ರ ಹಿಗ್ಗಲಿಲ್ಲ. ಸಣ್ಣಗುಡ್ಡಯ್ಯನವರು ತಮ್ಮ ಜೀವನಾನುಭವದ ಅವಧಿಯಲ್ಲಿ ಪ್ರಕಟಿಸಿದ್ದು ಮೂರೇ ಕವನ ಸಂಕಲನಗಳು ಮಾತ್ರ. ಮೊದಲನೆಯದಾಗಿ 'ಅಭೀಪ್ಸೆ' ಎರಡನೆಯದಾಗಿ 'ವಸಂತದ ಕನಸುಗಳು' ಮೂರನೆಯದಾಗಿ 'ಭಿನ್ನ'.

ಈ ಅಧ್ಯಯನವು ಮುಖ್ಯವಾಗಿ ಸಣ್ಣಗುಡ್ಡಯ್ಯನವರ ಕಾವ್ಯದ ಸ್ವರೂಪವನ್ನು ಒಳಗೊಂಡಿದೆ. ಈಗಾಗಲೇ ಪ್ರಕಟಗೊಂಡ ಮೂರು ಕವನ ಸಂಕಲನಗಳನ್ನು ಇಟ್ಟುಕೊಂಡು ಅವರ ಕಾವ್ಯದಲ್ಲಿ ನಿಸರ್ಗಾನುಸಂಧಾನ, ವಾಸ್ತವಿಕ ಚಿತ್ರಣ, ಕಾವ್ಯದಲ್ಲಿ ಪ್ರೇಮ ಎಂಬ ಮೂರು ವಿಷಯದ ಅಡಿಯಲ್ಲಿ ಅಧ್ಯಯನವನ್ನು ವಿಸ್ತರಿಸಲಾಗಿದೆ.

## ೩.೨. ಎಚ್.ಜಿ.ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ನಿಸರ್ಗಾನುಸಂಧಾನ

ನವೋದಯ ಸಂಪ್ರದಾಯದ ಕವಿಗಳಲ್ಲಿ ನಿಸರ್ಗ ಗೀತೆಗಳನ್ನು ಬರೆಯುವುದು ಸಾಮಾನ್ಯ ಸಂಗತಿಯಾಗಿದೆ. ತಾತ್ವಿಕವಾಗಿ ನವೋದಯ ಮನೋಧರ್ಮದ ಸಣ್ಣಗುಡ್ಡಯ್ಯನವರು ಸಹ ಹಲವಾರು ನಿಸರ್ಗ ವರ್ಣನೆಯ ಕವನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ 'ಬಾಳು ಬೆಳಂದಿಗಳು', 'ಸಣ್ಣಮಲ್ಲಿಗೆ', 'ಅರಳು ಮನಸೇ', 'ಹಕ್ಕಿ', 'ಮಾವು', 'ಬಿಸಿಲು', 'ಹೆಣ್ಣುಚಂದ್ರ', 'ತೆಂಗು', 'Peace under the trees', 'ಬಣ್ಣದ ಹುಳು' ಇತ್ಯಾದಿ.

ಸಣ್ಣಗುಡ್ಡಯ್ಯನವರು ಮಾಡಿರುವ ಅನುವಾದಗಳು ಸಹ ಹೆಚ್ಚಾಗಿ ಪ್ರಕೃತಿ ವರ್ಣನೆಗೆ ಸಂಬಂಧಪಟ್ಟವಾಗಿರುವುದು ಗಮನಾರ್ಹ. ಉದಾಹರಣೆಗೆ ವರ್ಡ್ಸ್‌ವರ್ತನ 'To Daffardils' ಕವಿತೆಯ ಅನುವಾದವಾಗಿರುವ 'ಸಣ್ಣಮಲ್ಲಿಗೆ' ಕವನ ವರ್ಡ್ಸ್‌ವರ್ತನು ಇಂಗ್ಲಿಷ್ ರೋಮ್ಯಾಂಟಿಕ್ ಕವಿಗಳಲ್ಲಿ ತನ್ನ ನಿಸರ್ಗ ಗೀತೆಗಳಿಗೆ ಖ್ಯಾತನಾದವನು ಎಂಬುದು ಉಲ್ಲೇಖನೀಯ. ಕುವೆಂಪು ಮುಂತಾದವರಿಗೆ ವರ್ಡ್ಸ್‌ವರ್ತ್ ಈ ಕಾರಣಕ್ಕಾಗಿಯೇ ಪ್ರಭಾವ ಬೀರಿರುವ ಕವಿಯಾಗಿರುವನು. 'ಸಣ್ಣಮಲ್ಲಿಗೆ' ಕವನವು ಒಂದು ಅನುವಾದವೆಂದು ಅನಿಸದೆ ಸಣ್ಣಗುಡ್ಡಯ್ಯನವರು ಬರೆದ ಸ್ವತಂತ್ರ ಕವಿತೆಯಂತೆ ಕನ್ನಡದ್ದಾಗಿದೆ. ಈ ಕವಿತೆಯಲ್ಲೂ ಕೂಡ ಬದುಕಿನ ಸಂಭ್ರಮ ಮತ್ತು ನಶ್ವರತೆಗಳ ಚಿಂತನೆ ಅಡಕವಾಗಿದೆ. ನಿಸರ್ಗ ಗೀತೆಗಳಲ್ಲಿ ದಾರ್ಶನಿಕ ಆಯಾಮವನ್ನು ತರುವ ಸಣ್ಣಗುಡ್ಡಯ್ಯನವರ ಸ್ವಭಾವಕ್ಕೆ ಇದು ಸಾಕ್ಷಿಯಾಗಿದೆ.

'ಅರಳು ಮನಸೇ' ಕವಿತೆಯು ಕೂಡ ಮನುಷ್ಯರು ಅರ್ಥಪೂರ್ಣವಾಗಿ ಬದುಕುವ ಬೇರೆ ಬೇರೆ ವಿಧಾನಗಳನ್ನು ಶೋಧಿಸುವ ಕವಿತೆಯಾಗಿದೆ. ಈ ಬೇರೆ ಬೇರೆ ವಿಧಾನವನ್ನು ಈ ಕವಿತೆಯು ನಿಸರ್ಗದ ರೂಪಕಗಳಲ್ಲಿ ಹಿಡಿದಿಡುತ್ತದೆ.

> "ಮಾರ್ನುಡಿವ ಶಿಲೆಯಂತೆ ಎದೆಯ ಇಂಗಿತವರಿತು,
> ಸಮರಸದ ಸೌಗಂಧ, ಅನುಕಂಪೆಯೊರತೆಯೊಲು
> ಕಿವಿಗೊಡುವ ದನಿಗೊಡುವ ಗೆಳೆಯರಿರೆ ಬಳಿಯಲ್ಲಿ
> ನೋವು ನರಕದ ಬದುಕು ಚಂದ್ರಿಕಾಯಾನ
> ಎಳೆ ಬಿಸಿಲ ಆಸಾರದಲಿ ಮಲ್ಲಿಗೆಯ ತೆರದಿ
> ಕಾರಮುಗಿಲನು ಕಂಡು ನವಿಲು ಕೆದರುವ ತೆರದಿ
> ಅರಳು ಮನಸೇ ಅರಳು
> ಅರಳು ಅರಳು" (ಅರಳು ಮನಸೇ)[೧]

ಇಲ್ಲಿ ಬರುವ ಚಂದ್ರಿಕೆ, ಕುಮುದಿನಿ, ಎಳೆ ಬಿಸಿಲು, ಕಡಲು, ಮಲ್ಲಿಗೆ, ತರಗು, ಸೂರ್ಯಕಾಂತಿ, ನಾಗರಹಾವು, ನವಿಲು ಮುಂತಾದ ನಿಸರ್ಗದ ಬೇರೆ ಬೇರೆ ಸಂಗತಿಗಳು ಕವಿಯ ಮನಸ್ಸು ಮತ್ತು

ವ್ಯಕ್ತಿತ್ವವೂ ಅರಳಿ ಬೆಳೆಯುವುದಕ್ಕೆ ಪ್ರೇರಕ ಅಂಶಗಳಾಗಿವೆ. ಇಲ್ಲಿ ನಿಸರ್ಗ ವರ್ಣನೆ ಅಷ್ಟು ಮುಖ್ಯವಲ್ಲ. ಅದರ ಮೂಲಕ ಮಾನವ ಬದುಕು ಕಲಿಯುವ ಪಾಠ, ಮಾನವ ಪ್ರೇರಣೆ ಮುಖ್ಯವಾದುದು. ಈ ಹಿನ್ನೆಲೆಯಲ್ಲಿ ನೋಡಿದಾಗ ಸಣ್ಣಗುಡ್ಡಯ್ಯನವರು ಶುದ್ಧ ನಿಸರ್ಗ ಗೀತೆಗಳನ್ನು ಬರೆಯವುದಿಲ್ಲ ಎನ್ನಬಹುದು. ಇದನ್ನು ನಿಸರ್ಗದ ಮಾನವೀಕರಣ ಎಂದು ಕರೆಯಬಹುದು. ಆಶ್ಚರ್ಯವೆಂದರೆ ಈ ಬಗೆಯ ನಿಸರ್ಗದ ಚಿತ್ರಗಳುಳ್ಳ ಕವಿತೆಗಳು ಸಣ್ಣಗುಡ್ಡಯ್ಯನವರ ಮೊದಲ ಸಂಕಲನಕ್ಕಿಂತ ಹೆಚ್ಚಾಗಿ ಎರಡು ಮತ್ತು ಮೂರನೆಯ ಸಂಕಲನಗಳಲ್ಲಿ ಇರುವುದು. 'ವಸಂತದ ಕನಸುಗಳು' ಕವಿತೆಯ 'ಹಕ್ಕಿ' ಕವಿತೆಯು ತೀರ ಚಿಕ್ಕ ಕವಿತೆಯಾಗಿದ್ದು ಸಣ್ಣಗುಡ್ಡಯ್ಯನವರ ನಿಸರ್ಗಾನುಸಂಧಾನಕ್ಕೆ ಒಳ್ಳೆಯ ನಿದರ್ಶನವಾಗಿದೆ.

ಸಣ್ಣ ನೀಳ ಕೊರಳು
ಒಂದೆ ತಬ್ಬು ಉಬ್ಬಿದೆಡೆ
ಹೆಗಲಿನಿಂದ ಚಾಚಿಕೊಂಡ
ಕೆಂಪು ದಾವಣಿ ರೆಕ್ಕೆ
ನಡೆದರೆ, ಹುಲ್ಲು ಪೊದರಿನಲಿ
ಪುಗುಡೆ ಹರಿದಂತೆ
ತರಪರ ಸದ್ದು;
ಈ ಹಕ್ಕಿ
ನನ್ನೆದೆ ಗೂಡನು ಹೊಕ್ಕು
ಈಗಷ್ಟೇ ಹೋಯಿತು ಎದ್ದು (ಹಕ್ಕಿ)[೨]

ಇಲ್ಲಿ ಕವಿತೆಯ ಮುಕ್ಕಾಲು ಭಾಗವು 'ಹಕ್ಕಿ'ಯ ವರ್ಣನೆಯಿಂದ ಕೂಡಿದೆ. ಆದರೆ ಕವಿತೆ ಕವಿತೆಯ ವರ್ಣನೆ ಮುಗಿಯುವುದಿಲ್ಲ. "ಈ ಹಕ್ಕಿ ನನ್ನೆದೆ ಗೂಡನು ಹೊಕ್ಕು ಈಗಷ್ಟೇ ಹೋಯಿತು ಎದ್ದು"[೩] ಎಂದು ನಾಟಕೀಯವಾಗಿ ಕವಿತೆಯ ನಾಯಕನ ಭಾವದ ಜೊತೆಗೆ ಬಸಮ ಹೋಗುತ್ತದೆ. 'ಹಕ್ಕಿ' ಇರುವುದು ಹೊರಗಲ್ಲ, ಎದೆಯ ಗೂಡಿನಲ್ಲಿ ಎಂಬುದು ಇಲ್ಲಿನ ಭಾವವಾಗಿದೆ.

'ಮಾವು' ಕವಿತೆಯು ಕೇವಲ ಹೆಣ್ಣಿನ ವರ್ಣನೆಗೆ ಮುಗಿಯುವುದಿಲ್ಲ. ಇಡೀ ಕವಿತೆಯು ಮಾವು, ಕಾಯಿ, ದೋರೆ ಹಾಗೂ ಹಣ್ಣು ಈ ನಾಲ್ಕು ಅವಸ್ಥೆಯಲ್ಲಿ ಮನುಷ್ಯನ ನಾಲಿಗೆಗೆ ಹೇಗೆ ನಾಲ್ಕು ಬಗೆಯ ರುಚಿಗಳ ಅನುಭವವನ್ನು ಕೊಡುತ್ತದೆ ಎಂಬುದನ್ನು ಕವಿತೆ ವರ್ಣಿಸುತ್ತದೆ. ಮಾವಿನ ನಾಲ್ಕು ಅವಸ್ಥೆಗಳು ಮನುಷ್ಯ ಬಾಳಿನ ನಾಲ್ಕು ಅವಸ್ಥೆಗಳ ಸಂಕೇತವಾಗಿ ಬರುತ್ತದೆ. ಹಲವು ಅನುಭವದ ಹಂತಗಳನ್ನು ದಾಟಿ ಮನುಷ್ಯನು ಮಾಗುವ ಹಂತಕ್ಕೆ ಬೆಳೆಯಬೇಕು ಎಂಬುದನ್ನು ಕವಿತೆ ಅದ್ಭುತವಾಗಿ ಧ್ವನಿಸುತ್ತದೆ. "ಓಟೆಯು ಕೂಡ ಮೊಳೆಯುವುದು" ಎಂಬ ಸಾಲು ತನ್ನ ಎಲ್ಲವನ್ನು ಅರ್ಪಣೆ ಮಾಡಿದ

ಬಳಿಕವೂ ಬೀಜದ ಮೂಲಕ ಉಪಯುಕ್ತವಾಗುವುದನ್ನು ಸೂಚಿಸುತ್ತದೆ. ಮನುಷ್ಯ ಸಾವಿನ ನಂತರವೂ ಮತ್ತೊಬ್ಬರಿಗೆ ಪ್ರೇರಣೆ ಒದಗಿಸುವ ಮೂಲಕ ಉಪಯುಕ್ತ ಆಗಬೇಕು ಎಂಬುದು ಕವಿತೆಯ ಧ್ವನ್ಯಾರ್ಥವಿರಬಹುದು ಎನಿಸುತ್ತದೆ. 'ಬಿಸಲು' ಕವಿತೆಯು ಬಿಸಿಲಿನ ಬೇರೆ ಬೇರೆ ಪರಿಣಾಮಗಳನ್ನು ವರ್ಣಿಸುತ್ತದೆ. ಓಡುವ ಮುಗಿಲು, ಕಾಡುವ ನೆಲ, ನೆಲಕೆ ಇಳಿಯದ ಮಳೆ, ಅಲುಗದ ಎಲೆ, ಬಾರದ ನೀರು, ತೀರದ ಧೂಳು, ಇಂಗದ ಹಸಿವು, ಭಾರವಾದ ಬದುಕು ಇಲ್ಲಿ ಬರುತ್ತವೆ. ಆದರೆ ಕಡೆಯ ಸಾಲು ಈ ಎಲ್ಲ ಚಿತ್ರಗಳಿಗೆ ಚಿಂತನೆಯ ಮುಖವನ್ನು ಜೋಡಿಸುತ್ತದೆ. ಅದು ಹೀಗಿದೆ : "ಬರುವ ದಿನಗಳ ಮುಂಗಾಣ್ಕೆಯೆ ಈ ಬೇಸಿಗೆಯ ಬಿಸಿಲು?"[೪]; ಕವಿತೆಯು ಬೇಸಿಗೆ ಬಿಸಿಲನ್ನು ಬದುಕಿನ ಕಷ್ಟಗಳಿಗೆ ಸಂಕೇತವೆಂದು ಪರಿಭಾವಿಸಿದಂತಿದೆ. ಅಂದರೆ ಬೇಸಿಗೆ ಬಿಸಿಲಿನಂತೆ ಕಷ್ಟಗಳು ಮನುಷ್ಯನಿಗೆ ಬಾಳನ್ನು ಎದುರಿಸಲು ಕೊಡುವ ತರಬೇತಿ ಇದ್ದಂತೆ. ಅವು ಶಾಪವಲ್ಲ ಮುಂಬರುವ ಸುಖದ(ಮಳೆ) ದಿನಗಳ ಮಹತ್ವವನ್ನು ಮನಗಾಣಿಸಲೆಂದೇ ಈ ಬೀಸಿಲಿನ ಬೇಗೆ ಬಂದಂತಿದೆ. ಸಣ್ಣಗುಡ್ಡಯ್ಯನವರ ದಾರ್ಶನಿಕ ಸ್ವಭಾವವನ್ನು ಇಂಥ ಸಣ್ಣಪುಟ್ಟ ಪದ್ಯಗಳು ಸಹ ಪ್ರಕಟಿಸುತ್ತವೆ. ವಾಸ್ತವವಾದಿ ಕವಿ ಒಬ್ಬ ಮಾತ್ರ ಈ ಬಗೆಯ ಬದುಕಿನ ಕಷ್ಟಗಳನ್ನು ನಿಸರ್ಗದ ಅಥವಾ ಪ್ರಕೃತಿಯ ಕಠೋರತೆಯನ್ನು ಬಾಳಿಗೆ ಒಂದು ಪಾಠವಾಗಿ ಸ್ವೀರಿಸುವ ಧನಾತ್ಮಕ ಮನೋಭಾವವನ್ನು ಹೊಂದಿರುತ್ತಾನೆ.

ಸಣ್ಣಗುಡ್ಡಯ್ಯನವರು ಇಂಗ್ಲಿಷಿನಲ್ಲಿ ಬರೆದಿರುವ "Peace under the Trees" ಕವಿತೆ ಕೂಡ ಅವರ ನಿಸರ್ಗಾನುಸಂಧಾನದ ಮನೋಭಾವಕ್ಕೆ ಒಂದು ನಿದರ್ಶನವಾಗಿದೆ. ಬಾಳಿನ ಬೇಗೆಯಲ್ಲಿ ಬಳಲಿದಾಗಲೆಲ್ಲಾ ಕವಿ ಮರಗಳ ಸಾನಿಧ್ಯದಲ್ಲಿ ಹೋಗಿ ಸ್ವಾಂತನ ಪಡೆಯುವ ಮತ್ತು ಚೈತನ್ಯವನ್ನು ಪಡೆಯುವ ವಿಧಾನವನ್ನು ಈ ಕವಿತೆ ಒಳಗೊಂಡಿದೆ. ಈ ಕವಿತೆಯು ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತಗಳಲ್ಲಿ' ಬರುವ ಶೇಕ್ಸ್‌ಪಿಯರ್ ಕವಿಯ "Under the Green wood Tree" ಕವಿತೆಯ ಗಾಢ ಪ್ರಭಾವದಲ್ಲಿ ಹುಟ್ಟಿಕೊಂಡಿದೆ.

'ಹೆಣ್ಣುಚಂದ್ರ' ಕವಿತೆಯ ನಿಸರ್ಗದ ಮಾನುಷೀಕರಣಕ್ಕೆ ಮತ್ತೊಂದು ಒಳ್ಳೆಯ ನಿದರ್ಶನ. ಈ ಕವಿತೆಯಲ್ಲಿ ಹೆಣ್ಣನ್ನು ಚಂದ್ರನಿಗೆ ಅಥವಾ ಚಂದ್ರನನ್ನು ಹೆಣ್ಣಿಗೆ ಸಮೀಕರಿಸಲಾಗಿದೆ. ಪೂರ್ಣಚಂದ್ರನು ಅಗಸದಲ್ಲಿ ಕಾಣಿಸಿಕೊಳ್ಳುವುದು ಒಂದೇ ಒಂದು ದಿನ ಉಳಿದಂತೆ ಸವೆಯುತ್ತಾ ಸವೆಯುತ್ತಾ ಹೋಗುತ್ತಾನೆ. ಇಲ್ಲವೇ ತುಂಡಾದ ಅವಸ್ಥೆಯಿಂದ ಪೂರ್ಣತ್ವ ಪಡೆಯಲು ಹೆಣಗುತ್ತಾನೆ. ಕವಿತೆಯು ಭಾರತದ ಹಳ್ಳಿಯ ಗೃಹಿಣಿಯರಿಗೆ ಕರಗುತ್ತ ಹೋಗುವ ಚಂದ್ರನನ್ನು ಹೋಲಿಸುತ್ತದೆ. ಸೂರ್ಯನ ಬೆನ್ನುಬಿದ್ದು ಬೇರೆ ಬೇರೆ ಆಕಾರ ತಾಳುವ ಚಂದ್ರನಂತೆ ಬೆನ್ನಬಿದ್ದ ಹೆಣ್ಣು ಬಡ ಹಳ್ಳಿಯ ಗೃಹಿಣಿಯು ಕಷ್ಟಪಡುವುದನ್ನು ಕಾಣಬಹುದಾಗಿದೆ. 'ತೆಂಗು' ಕವಿತೆಯು ಕೂಡ ಮಾನವ ಬಾಳಿನ ಒಂದು ಅವಸ್ಥೆಯನ್ನು ಚಿತ್ರಿಸುವ ಒಂದು ಪ್ರತಿಮೆಯಾಗುತ್ತದೆ.

‘‘ಅಂಗಳದಲ್ಲೊಂದು ತೆಂಗಿನ ಮರ
ಮೇಲೆ ತಿಂಗಳ ಬೆಳಕಿನ ಮರ;
ಫಳ ಫಳ ಫಳ ಮಂದಸ್ಮಿತ
ನೂರು ಜನಕೆ ಸಾಲುವ ಹಿತ
ಮೇಲೆ ಕಣ್ಣು ಮಾಡಿ ನೋಡಿದಾಗಲೆಲ್ಲ
ಏನೋ ಸುಖ
ನೆನಪಿನಲ್ಲಿ ಮೂಡಿ ನಿಂತು ಬೆಳೆಯುತಿರುವ
ಮಗಳ ಮುಖ’’ (ತೆಂಗು)[೫]

ಇಲ್ಲಿ ಅಂಗಳದಲ್ಲಿರುವ ತೆಂಗಿನ ಮರವು ಕವಿಗೆ ತಿಂಗಳ ಬೆಳಕಿನ ವರವಾಗಿ ಕಾಣುತ್ತದೆ. ಅದರ ಮುಗುಳ್ನತೆಯು ನೂರು ಜನಕ್ಕೆ ಹಿತವಾಗಿ ಕಾಣುತ್ತದೆ. ಕವಿಗೆ ಅಂಗಳದಲ್ಲಿ ಬೆಳೆದ ‘ತೆಂಗು’ ತನ್ನ ಮಗಳಂತೆ ತೋರುತ್ತದೆ. ಆಕಾಶದತ್ತೆರಕ್ಕೆ ಬೆಳದು ಅಂತರಿಕ್ಷದಲ್ಲಿ ತಲೆ ಇಟ್ಟು ಬೆಳೆವ ತೆಂಗು ಕವಿಗೆ ಉದಾತ್ತ ವ್ಯಕ್ತಿಯೊಬ್ಬನ ಎತ್ತರದಂತೆ ಕಾಣುತ್ತದೆ. ಆ ಆಕಾಶಕ್ಕೆ ತಲೆ ಎತ್ತಿ ಬೆಳೆದರೂ ಕೂಡ ಅಷ್ಟೇ ಆಳದಲ್ಲಿ ನೆಲದೊಳಗೆ ತೆಂಗು ಬೇರು ಬಿಟ್ಟಿರುತ್ತದೆ. ನೆಲದಲ್ಲಿ ಕಾಲೂರಿ ಆಕಾಶದಲ್ಲಿ ತಲೆ ಎತ್ತುವ ಈ ಪರಿ ಮನುಷ್ಯನ ಆದರ್ಶ ಬಾಳುವೆಯ ರೂಪಕದಂತೆ ಕವಿಗೆ ಕಂಡಿದೆ.

ತಮ್ಮ ನಿಸರ್ಗ ಕುರಿತ ಕವಿತೆಗಳಲ್ಲಿ ಇಲ್ಲವೇ ಅನುವಾದಗಳಲ್ಲಿ ಪ್ರಕೃತಿಯ ಮಾನುಷೀಕರಣ ಸಾಧಿಸುವ ಸಣ್ಣಗುಡ್ಡಯ್ಯನವರ ಕವಿತೆಗಳಲ್ಲಿ ‘ಚೈತ್ರದ ಹಾಡು’ ಮಾತ್ರ ಇದಕ್ಕೆ ಭಿನ್ನವಾಗಿ ನಿಲ್ಲುತ್ತದೆ. ಇದು ಶುದ್ಧ ನಿಸರ್ಗ ವರ್ಣನೆಯ ಸಂಭ್ರಮದ ಗೀತೆಯಾಗಿ ಉಳಿಯುವುದನ್ನು ಕಾಣಬಹುದು.

‘ಬಣ್ಣದ ಹುಳು’ ಕವಿತೆಯಲ್ಲಿ ಪ್ರಕೃತಿ ಮತ್ತು ಮನುಷ್ಯನ ನಡುವಣ ಸಂಬಂಧದ ಕುರಿತು ಚಿಂತನೆಗಳನ್ನು ಕಾಣಬಹುದಾಗಿದೆ. ಕವಿತೆ ಪ್ರಾರಂಭವಾಗುವುದು ಒಂದು ಸಾಧಾರಣ ಸಂಗತಿಯ ಪ್ರಸ್ತಾಪದಿಂದ. ಕವಿತೆಯ ನಾಯಕ ಯಾವುದೋ ಪುಸ್ತಕ ಓದುವುದರಲ್ಲಿ ತಲ್ಲೀನರಾಗಿದ್ದಾನೆ. ಪುಸ್ತಕದ ಹಾಳೆಯ ಮೇಲೆ ಬೀಳುತ್ತದೆ. ಆ ಪುಟ್ಟ ಜೀವಿಗೆ ತೊಂದರೆಯಾದೀತೆಂಬ ಆತಂಕದಿಂದ ಪುಸ್ತಕದ ಪುಟ ತಿರುಹದೆ ಅದರ ಚಲನವಲಗಳನ್ನು ನೋಡಿದ ಆತ ಓದನ್ನು ಸ್ಥಗಿತಗೊಳಿಸಿ ಆಸಕ್ತಿಯಿಂದ ಗಮನಿಸತೊಡಗುತ್ತಾನೆ. ಅದು ಕವಿಯತ್ತ ಎರಡು ಹೆಜ್ಜೆ ಚಲಿಸಿ, ರೆಕ್ಕೆ ಬಿಚ್ಚಿ ‘ಅನಾಮತ್ತು ಮೇಲಕ್ಕೆ ಹಾರಿ’ ಚುಕ್ಕೆಯಂತೆ ಕಾಣಿಸುತ್ತದೆ. ಆಕಾಶದಲ್ಲಿ ಮಿರುಗುವ ನಕ್ಷತ್ರದಂತೆ ತೋರುತ್ತದೆ. ಅಷ್ಟೇ ಅಲ್ಲ ಸಾಹಸ ಪ್ರದರ್ಶಿಸಿ ಪ್ರೇಕ್ಷಕರ ಎದುರು ನಿಂತು ಮೆಚ್ಚುಗೆ ಸ್ವೀಕರಿಸಿ, ಕೃತಜ್ಞತೆಯಿಂದ ತಲೆಬಾಗುವ ಸರ್ಕಸ್ ಚೆಲುವೆಯನ್ನು ಆತನಿಗೆ ನೆನಪಿಸುತ್ತದೆ.

"ಆ ಕ್ಷಣ, ಚಿಟ್ಟೆಲಂಗವ ಹರಡಿ
ಅಪ್ಪಾಳೆ ತಿರುಗುವ ಪುಟ್ಟ ಮಗಳ ಮೇಲಿನಷ್ಟೇ ಮೋಹ
ನನ್ನ ಎದೆಯ ಬಟ್ಟಲಿನಲ್ಲಿ ತೊಟ್ಟಿಕ್ಕಿತು"[೬]

ಇಲ್ಲಿ ಸಂಭವಿಸಿರುವ ಭಾವ ವಿಕಾಸದ ಮಜಲುಗಳನ್ನು ಗಮನಿಸಬೇಕು. ಕವಿಯ ಭಾವಕೋಶದಲ್ಲಿ ಆ ಹುಳು ಅವಸ್ಥಾಂತರಗಳನ್ನು ಪಡೆಯುವ ವಿಧಾನವು ಸ್ವಾರಸ್ಯಕರವಾಗಿದೆ. ಚಿಟ್ಟೆ ಚಿತ್ತಾರದ ಲಂಗವನ್ನು ಹರಡಿಕೊಂಡು ಅಪ್ಪಾಳೆ ತಿರುಗುತ್ತಾ ಆಟವಾಡುವ ತನ್ನ ಪುಟ್ಟ ಮಗಳಂತೆ ತೋರುತ್ತದೆ.

'ದೂರಕ್ಕೆ ಹಾರಬೇಡ, ದೀಪಕ್ಕೆ ತಾಗಬೇಡ, ಹೋಗಿ ಬಾ' ಎಂದು 'ಮನದಲ್ಲೇ ಅದರ 'ತಲೆ ಸವರಿ ಬೀಳ್ಕೊಟ್ಟೆ'[೭] ಎಂಬುದರಲ್ಲಿನ ಧ್ವನಿ ಶ್ರೀಮಂತಿಕೆ ತುಂಬಾ ಅಪರೂಪದುದಾಗಿದೆ. 'ಬಣ್ಣದ ಹುಳು' ಕವಿತೆಯ ಕೊನೆಯ ಭಾಗದಲ್ಲಿ ಸಕಲ ಜೀವರಾಶಿಗಳ ಕುರಿತಾಗಿ ಮನುಷ್ಯ ರೂಪಿಸಿಕೊಳ್ಳಬೇಕಾಗಿರುವ ಪ್ರೀತಿ ವಾತ್ಸಲ್ಯಗಳ, ಸ್ವರೂಪ ಹೇಗಿರಬೇಕೆಂಬುದನ್ನು ಕವಿ ತುಂಬಾ ಸುಂದರವಾಗಿ ಸೂಚಿಸಿದ್ದಾರೆ.

## ೩.೩. ಎಚ್.ಜಿ.ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ವಾಸ್ತವಿಕತೆಯ ಚಿತ್ರಣ

ಎಚ್.ಜಿ.ಸಣ್ಣಗುಡ್ಡಯ್ಯನವರು ನವೋದಯ ಮನೋಧರ್ಮದ ಕವಿಗಳಾದರೂ ಕೇವಲ ನಿಸರ್ಗದ ವರ್ಣನೆಗಳಿಗೂ, ರಮ್ಯ ಚಿತ್ರಣಗಳಿಗೂ ತಮ್ಮ ಕಾವ್ಯವನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಅವರು ತಮ್ಮ ಸುತ್ತಲಿನ ಸಮಾಜದ ವಾಸ್ತವಿಕ ಚಿತ್ರಣಗಳನ್ನು ಕೊಡುವುದರತ್ತ ಕಾವ್ಯವನ್ನು ದುಡಿಸಿದರು. ಅವರು ತಮ್ಮ ಕವಿತೆಗಳಿಗೆ ಪೀಠಿಕೆಯಾಗಿ ಕೊಡುವ ಸಂದರ್ಭ ಸೂಚಿಗಳು ಈ ದೃಷ್ಟಿಯಿಂದ ಮುಖ್ಯವಾಗಿವೆ. ಇವು ಸಣ್ಣಗುಡ್ಡಯ್ಯನವರು ಸಮಾಜದಲ್ಲಿ ನಡೆದ ವಿದ್ಯಾಮಾನಗಳಿಗೆ ಪ್ರತಿಕ್ರಿಯಿಸುವಂತೆ ತಮ್ಮ ಕವಿತೆಯನ್ನು ಬರೆಯುವುದಕ್ಕೆ ಒಂದು ಸಾಕ್ಷ್ಯವಾಗಿದೆ. ಅವರ ಪ್ರತಿಕ್ರಿಯೆಗಳು ನಮ್ಮ ಸಮಾಜದ ಬೇರೆ ಬೇರೆ ಕ್ಷೇತ್ರಗಳಲ್ಲಿ ನಡೆಯುವ ವಿದ್ಯಾಮಾನಗಳಿಗೆ ಸಂಬಂಧಿಸಿವೆ. ಮೂಲತಃ ಆದರ್ಶವಾದಿಯಾದ ಸಣ್ಣಗುಡ್ಡಯ್ಯನವರು ಸಾಮಾಜಿಕ ಘಟನೆಗಳಿಗೆ ವೈಚಾರಿಕವಾಗಿ ಮತ್ತು ನೈತಿಕ ಆದರ್ಶದಲ್ಲಿ ಪ್ರತಿಕ್ರಿಯಿಸುತ್ತಾರೆ. ಉದಾಹರಣೆಗೆ 'ಧರ್ಮಸ್ಥಳದ ಬಾಹುಬಲಿಗೆ' ಎಂಬ ಕವಿತೆ 'ಸಂತಾಪ' 'ಆಪತ್ತಿನಪತ್ರ' 'ರಾಷ್ಟ್ರಪಿತನಿಗೊಂದು ಕಿವಿ ಮಾತು', 'ಭಾರತೊದಳಗೇನಿಲ್ಲ' 'ದುಡಿದವರ ಹಾಡು', 'ಉಪಾಧ್ಯರ ಕಷ್ಟ' ಇತ್ಯಾದಿ ಕವನಗಳು.

ಸಣ್ಣಗುಡ್ಡಯ್ಯನವರ ವಾಸ್ತವಾದಿ ವಿಧಾನದಲ್ಲಿ ಅನೇಕ ಸಲ ಕವಿತೆಗಳು ಗುಣಾತ್ಮಕವಾಗಿರುತ್ತವೆ. ವಾಕ್ಯವಾಗುತ್ತವೆ. ಅವರ ಕಲ್ಪನಾ ಪ್ರಧಾನವಾದ ಕವಿತೆಗಳಿಗೆ ಹೋಲಿಸಿದರೆ ಇವು ಅವರ ಶ್ರೇಷ್ಠ ಅಥವಾ ಉತ್ತಮ ಕವಿತೆಗಳು ಅಲ್ಲ. ಆದರೆ ಇವು ಅವರ ವರ್ತಮಾನಕ್ಕೆ ತುಡಿಯುವ ಜೀವಂತಿಕೆಯ ಗುಣವನ್ನು ಸೂಚಿಸುತ್ತವೆ. 'ಅತ್ಯುತ್ತಮ' ಕವಿತೆ ಬರೆಯುವುದಕ್ಕಿಂತ ವರ್ತಮಾನದ ಘಟನೆಗೆ ಜೀವಂತವಾಗಿ

ಸ್ಪಂದಿಸುವುದು ಮತ್ತು ಆ ಸ್ಪಂದನವನ್ನು ಓದುಗರ ಜೊತೆಯಲ್ಲಿ ಹಂಚಿಕೊಳ್ಳುವುದು ಅವರ ಉದ್ದೇಶವಾಗಿದೆ. ಈ ಕವಿತಾ ರಚನೆಯ ವಿಧಾನವನ್ನು ಬಹುಶಃ ಸಣ್ಣಗುಡ್ಡಯ್ಯನವರು ನವೋದಯ ಪರಂಪರೆಯಿಂದಲೇ ಪಡೆದಿರುವ ಹಾಗೆ ಕಾಣುತ್ತದೆ. ಉದಾಹರಣೆಗೆ ಕುವೆಂಪುರವರು (ಪಾಕಿಸ್ತಾನದ ಜನಕನೆನಿಸಿದ) ಮಹಮ್ಮದಾಲಿ ಜಿನ್ನಾ ಅವರು ನಿಧನರಾದಾಗ ಬರೆದ, ಬರೆಯುವ ಪ್ರತಿಕ್ರಿಯಾ ಕವಿತೆ. ಅದರಲ್ಲಿ ಕುವೆಂಪುರವರು ಜಿನ್ನಾರನ್ನು 'ಕಲಿಯುಗದ ರಾವಣ' ಎಂದು ಕಟು ಟೀಕೆಗೆ ಒಳಪಡಿಸುವುದನ್ನು ಗಮನಿಸಬಹುದು. ಇದೇ ಮಾದರಿಯಲ್ಲಿ ಪಾಕಿಸ್ಥಾನದಲ್ಲಿ ಅಧ್ಯಕ್ಷನಾಗಿದ್ದ ಭುಟ್ಟೊ ಸಾವನ್ನು ಕುರಿತು ಸಣ್ಣಗುಡ್ಡಯ್ಯ ಬರೆಯುವ ಸಂತಾಪ ಪದ್ಯ ಗಮನಿಸಬಹುದು. ಇಡೀ ಪದ್ಯದಲ್ಲಿ ಭುಟ್ಟೊ ಮತ್ತು ಜಿಯಾ ಉಲ್-ಹಕ್ ಅವರ ನಡುವಣ ಸಂಘರ್ಷದ ಕಥನವಿದೆ. ಈ ಪದ್ಯಕ್ಕೆ ಕವಿ ಮೂರು ಪುಟಗಳ ಭಾವಸಂದರ್ಭವನ್ನು ನೀಡುತ್ತಾರೆ. ಇದೇ ರೀತಿಯಲ್ಲಿ 'ಆಪತ್ತಿನ ಪತ್ರ' ಕವನವನ್ನು ಗಮನಿಸಿಬಹುದು. ಇದು ಭಾರತದ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾಗಾಂಧಿ ಅವರು ದೇಶದೊಂದಿಗೆ ತುರ್ತು ಪರಿಸ್ಥಿತಿಯನ್ನು ಹೇರಿದಾಗ ರಚಿಸಿದ ಪದ್ಯವಾಗಿದೆ.

ಸಣ್ಣಗುಡ್ಡಯ್ಯನವರ ಕವಿತೆಗಳಲ್ಲಿ ವಾಸ್ತವವಾದಿ ಚಿತ್ರಣವು ಸಾಮಾಜಿಕ ವಿದ್ಯಮಾನಗಳಿಗಿಂತ ಹೆಚ್ಚಾಗಿ ರಾಜಕೀಯ ವಿದ್ಯಮಾನಗಳಿಗೆ ಸೇರಿದುದಾಗಿದೆ. ಇದು ಅವರಿಗಿರುವ ರಾಜಕೀಯ ಪ್ರಜ್ಞೆಯ ಸಂಕೇತವಾಗಿದೆ. ಈ ಬಗೆಯ ಕವನಗಳು ಕವಿ ಒಬ್ಬ ನಾಗರಿಕನಾಗಿ ತನ್ನ ಆಸುಪಾಸಿನಲ್ಲಿ ನಡೆಯುವ ಘಟನೆಗಳಿಗೆ ಬಹಳ ಎಚ್ಚರದಿಂದ ಜಾಗೃತ ಮನಸ್ಸಿನಿಂದ ಪ್ರತಿಕ್ರಿಯಿಸುವ ಸ್ವಭಾವವನ್ನು ಸೂಚಿಸುತ್ತದೆ. ಮೂಲತಃ ಸಣ್ಣಗುಡ್ಡಯ್ಯನವರು ಸೀಮಿತ ನೆಲೆಯಲ್ಲಿ ಒಬ್ಬ ಆಕ್ಟಿವಿಸ್ಟ್ ಕವಿ ಕೂಡ. ಅಂದರೆ ತಮ್ಮ ಸುತ್ತಮುತ್ತ ನಡೆಯುವ ಅನ್ಯಾಯದ ಸಂಗತಿಗಳಿಗೆ ಆಕ್ರೋಶದಿಂದ ಪ್ರತಿಕ್ರಿಯಿಸುವುದು. ಆ ಆಕ್ರೋಶವು ಎಲ್ಲರಿಗೂ ಹರಡುವಂತೆ ಮಾಡುವುದು. ಇದು ಅವರ ಬರಹದ ಕ್ರಿಯಾಶೀಲಗುಣವಾಗಿದೆ.

ಈ ಹಿನ್ನೆಲೆಯಲ್ಲಿ ಅಧ್ಯಾಯ ಒಂದರಲ್ಲಿ ಸಣ್ಣಗುಡ್ಡಯ್ಯನವರ ವ್ಯಕ್ತಿತ್ವದ ಬಗ್ಗೆ ಬಂದ ಒಂದು ಮಾತನ್ನು ನೆನಪಿಸಿಕೊಳ್ಳಬಹುದು. ಅದೆಂದರೆ ಶ್ರೀಯುತರು ತಾವು ಬದುಕುವ ಪರಿಸರವನ್ನು, ಕಟ್ಟುವ ಕಾಯಕವನ್ನು ಮಾಡಿದವರು ಎಂಬ ಮಾತು. ದೈನಂದಿನ ವಿದ್ಯಮಾನಗಳಿಗೆ ಪ್ರತಿಕ್ರಿಯಿಸುವುದು ಒಬ್ಬ ಜೀವಂತಿಕೆಯುಳ್ಳ ಅಧ್ಯಾಪಕನ ಕೆಲಸವೂ ಆಗಿದೆ. ಸಾಹಿತ್ಯ ಅಧ್ಯಾಪಕರಲ್ಲಿ ಈ ಬಗೆಯ ಸ್ಪಂದನಕ್ಕೆ ಹೆಚ್ಚು ಸಾಧ್ಯತೆಗಳು ಇರುತ್ತವೆ. ಹೀಗಾಗಿ ಸಣ್ಣಗುಡ್ಡಯ್ಯನವರ ವಾಸ್ತವಿಕ ಚಿತ್ರಣ ಉಳ್ಳ ಕವಿತೆಗಳು ಅವರ ಅಧ್ಯಾಪಕನ ಅಧ್ಯಾಪನದ ಭಾಗವಾಗಿಯೂ ಹುಟ್ಟಿಕೊಂಡಿವೆ. ವಿದ್ಯಾರ್ಥಿಗಳನ್ನು ವೈಚಾರಿಕವಾಗಿ ಪ್ರಚೋದಿಸುವ ಎಲ್ಲಾ ಅಧ್ಯಾಪಕರು ಹೀಗೆ ಸಮಕಾಲೀನ ವಿದ್ಯಮಾನಗಳನ್ನು ಸಾಹಿತ್ಯದ ಕಕ್ಷೆಒಳಗೆ ತಂದು ಚರ್ಚಿಸುತ್ತಾರೆ.

ಹೀಗೆ ಸಣ್ಣಗುಡ್ಡಯ್ಯನವರ ವಾಸ್ತವವಾದಿ ಚಿತ್ರಣವುಳ್ಳ ಕವಿತೆಗಳು ಅವರ ರಾಜಕೀಯ ಕ್ರಿಯಾಶೀಲತೆಯ ಮತ್ತು ಸಮಕಾಲೀನ ಪ್ರಜ್ಞೆಯುಳ್ಳ ಅಧ್ಯಾಪಕನ ಪರಿಣಾಮವಾಗಿವೆ.

ಸಣ್ಣಗುಡ್ಡಯ್ಯ ಅವರು ಗ್ರಾಮೀಣ ಪರಿಸರದಿಂದ ಬಂದ ಕವಿ. ಗ್ರಾಮೀಣ ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅಧ್ಯಾಪಕರಾದ ಅವರಿಗೆ ಭಾರತದ ಗ್ರಾಮೀಣ ಜಗತ್ತಿನ ಕಷ್ಟ ಮತ್ತು ದುರಂತಗಳ ಅರಿವು ಚೆನ್ನಾಗಿ ಇದೆ. ಅವುಗಳ ಗ್ರಾಮಗಳನ್ನು ವೈಭವೀಕರಣ ಮಾಡುವುದಿಲ್ಲ. ಅದೇ ರೀತಿ ನಗರಗಳಲ್ಲಿಯೂ ಕೇಡು ತುಂಬಿರುವುದನ್ನು ಅವರು ಗಮನಿಸಬಲ್ಲರು. ಅವರ 'ನಗರ' ಕವಿತೆಯಲ್ಲಿ ಈ ಕೇಡು ಮತ್ತು ಒಳಿತು ಎರಡನ್ನು ಒಳಗೊಂಡಿರುವ ನಗರದ ವಾಸ್ತವಾದಿ ಚಿತ್ರಣ ಕಾಣುತ್ತದೆ.

"ದಾರಿದ್ರ್ಯ
ಕೊಳಚೆ
ಕ್ರೌರ್ಯ
ಅನೀತಿ
ಅನ್ಯಾಯ
ಅಪಮಾನಗಳವಿಪುಲಮರಳುಗಾಡಿನ ನಡುವೆ
ಅರಳಿ ನಿಂತ
ವರ್ಣರಂಜಿತ
ಒಯಸಿಸ್"(ನಗರ)[೮]

ವಾಸ್ತವಾದಿ ಚಿತ್ರಣವನ್ನು ಕೊಡುವ ಕವಿ ಸಾಮಾನ್ಯವಾಗಿ ಸಮಾಜವಾದಿಯಾಗಿರುತ್ತಾನೆ. ಸಣ್ಣ ಗುಡ್ಡಯ್ಯ ಅವರು ಒಬ್ಬ ಆದರ್ಶವಾದಿ ಲೇಖಕ ಹೌದು. ಆದರೆ ಈ ಆದರ್ಶಕ್ಕಾಗಿ ಸಮಾಜದಲ್ಲಿರುವ ಕಠೋರ ವಾಸ್ತವವನ್ನು ಮರೆ ಮಾಚುವುದಿಲ್ಲ. ಈ ಗುಣವನ್ನು ಸಹ ಅವರು ಕುವೆಂಪು ಮುಂತಾದ ಹಿರಿಯ ಕವಿಗಳಿಂದ ಪಡೆದಿರುವ ಸಾಧ್ಯತೆ ಇದೆ. ಕುವೆಂಪುರವರು ಒಬ್ಬ ಆದರ್ಶವಾದಿ ಕವಿಯಾಗಿರುವಂತೆಯೇ ಸಮಾಜದ ವಾಸ್ತವಿಕತೆಗಳನ್ನು ಅನ್ಯಾಯಗಳನ್ನು ಗಮನಿಸುವ ಕವಿ. ಇದಕ್ಕೆ ಅವರ 'ಕಲ್ಕಿ' ಪದ್ಯ ಸಾಕ್ಷಿಯಾಗಿದೆ. ಈ ಹಿನ್ನೆಲೆಯಲ್ಲಿ ಸಣ್ಣಗುಡ್ಡಯ್ಯನವರ 'ದುಡಿವವರ ಹಾಡು' ಕವನವನ್ನು ಗಮನಿಸಬಹುದು. ಈ ಕವಿತೆಯು ದಲಿತ ಕವಿ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಸಂಕಲನದ 'ನನ್ನ ಜನರು' ಕವಿತೆಯನ್ನು ಗಾಢವಾಗಿ ನೆನಪಿಸುತ್ತದೆ. ಸಿದ್ಧಲಿಂಗಯ್ಯನವರ ಪ್ರಭಾವದಲ್ಲಿ ಈ ಕವಿತೆ ಹುಟ್ಟಿದೆಯೋ ಇಲ್ಲವೊ ಖಚಿತವಾಗಿ ಹೇಳುವುದು ಕಷ್ಟ. ಆದರೆ ಅದೇ ಬಗೆಯ ಸಂವೇದನೆಯನ್ನು ಈ ಕವಿತೆ ಒಳಗೊಂಡಿರುವುದು ಕಂಡುಬರುತ್ತದೆ.

"ಕಂಡವರ ಸೇವೆಯಲಿ ನೊಂದವರ ನವೆದವರು
ನೂರು ದುಡಿದು ಮೂರು ಇಸುಕೊಂಡು ಬಂದವರು
ಅಕ್ಕಿ ಮೂಟೆಯ ಹೊತ್ತು ಅನ್ನಕ್ಕೆ ಅತ್ತವರು
ತೊರೆಗೆ ಸೇತುವೆ ಬಿಗಿದು ಕೆರೆಯ ಕಟ್ಟಿದವರು
ಕಾಡು ಮೇಡು ಘಟ್ಟ ಪರ್ವತದ ಸುತ್ತೆಲ್ಲ
ಹೆದ್ದಾರಿಗೆ ಕಲ್ಲು ಹೊತ್ತವರು ಸತ್ತವರು (ದುಡಿವವರ ಹಾಡು)"

ಸಿದ್ಧಲಿಂಗಯ್ಯನವರ ಕವಿತೆಗೂ ಇದಕ್ಕೂ ಇರುವ ಮುಖ್ಯ ವ್ಯತ್ಯಾಸವೆಂದರೆ ಇದು ದಲಿತರನ್ನು ಒಳಗೊಂಡಂತೆ ಎಲ್ಲ ಬಗೆಯ ದುಡಿಯುವವರ ಬವಣೆಯನ್ನು ಒಳಗೊಂಡಿರುವುದು. ಈ ಕವಿತೆಯು ಸಣ್ಣಗುಡ್ಡಯ್ಯನವರ ಎಡಪಂಥೀಯ ಹಿನ್ನೆಲೆಯನ್ನು ಮತ್ತು ವರ್ಗ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ.

ಭಾರತದಲ್ಲಿ ಅಪ್ಸರೆಯರಿಗೆ ಮಿಗಿಲಾದ ಸ್ತ್ರೀಯರು, ಹೊನ್ನಿನ ಕಳಸವುಳ್ಳ ಗೋಪುರಗಳು, ಬಂಗಾರ ಬೆಳೆವ ಮಣ್ಣು ಎಲ್ಲಾ ಇವೆ. ಆದರೆ ಅವು ಸಿರಿವಂತರ ಪಾಲಾಗಿದೆ ಎಂಬುದು ಕವಿತೆಯ ಅಳಲಾಗಿದೆ. ಪ್ರಜಾಪ್ರಭುತ್ವವೆಂಬ ಹೆಸರುಳ್ಳ ರಾಜಕೀಯ ವ್ಯವಸ್ಥೆಯ ಆಳುವ ವರ್ಗಗಳು ಅಧಿಕಾರ ಹಿಡಿಯಲು ಮತ್ತು ಸಂಪತ್ತನ್ನು ದೋಚಲು ಒಂದು ಉಪಕರಣ ಆಗಿರುವುದನ್ನು 'ಪ್ರಜಾರಾಜ್ಯ' ಕವಿತೆಯ ಕಾಣಿಸುತ್ತದೆ. ಸ್ವಾತಂತ್ರಪೂರ್ವ ಭಾರತದಲ್ಲಿ ಹುಟ್ಟಿದ ಸಣ್ಣಗುಡ್ಡಯ್ಯನವರು ಆದರ್ಶಗಳ 'ಯುಗ'ವನ್ನು ಕಂಡವರು. ಅವರಿಗೆ ಸ್ವಾತಂತ್ರ್ಯಾನಂತರದ ಭಾರತವು ಹಿಡಿದ ಹಾದಿಯನ್ನು ಕಂಡು ಅಪಾರ ದುಗುಡವಾಗುತ್ತದೆ. ಸಿದ್ಧಯ್ಯ ಪುರಾಣಿಕ, ಕೊ.ಚನ್ನಬಸಪ್ಪ, ಜಿ.ಎಸ್.ಶಿವರುದ್ರಪ್ಪ ಮುಂತಾದ ಅನೇಕ ಲೇಖಕರು ಇದೇ ಬಗೆಯಲ್ಲಿ ಸ್ವತಂತ್ರ ಭಾರತದ ವಿದ್ಯಾಮಾನಗಳಿಗೆ ವಿಷಾದದ ಪ್ರತಿಕ್ರಿಯೆ ನೀಡುವ ಲೇಖಕರು. ಸಣ್ಣಗುಡ್ಡಯ್ಯನವರು ಕೇವಲ ಸಮಾಜದ ಕಟುವಾದ ವಾಸ್ತವವನ್ನು ಕೇವಲ ವ್ಯಂಗ್ಯದಿಂದ ವಿಡಂಬಿಸುವವರಲ್ಲ. ಇದಕ್ಕೆ ಬದಲಾಗಿ ಈ ವಿಷಮ ಸ್ಥಿತಿಯಿಂದ ಹೊರಬರುವ ಉಪಾಯಗಳನ್ನೂ ಕಾಣಿಸುವವರು. ಸಮಾಜ ಪರಿವರ್ತನೆ ಮಾಡುವ ಶಕ್ತಿಯು ಜನರಲ್ಲಿ ಇದೆ ಎಂಬ ನಂಬಿಕೆ ಅವರ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಬಹುಶಃ ದಲಿತ, ಬಂಡಾಯ, ಚಳುವಳಿಯ ಸಂದರ್ಭದಲ್ಲಿ ಈ ಬಗೆಯ ನಿಲುವುಳ್ಳ ಕವಿತೆಗಳನ್ನು ಸಣ್ಣಗುಡ್ಡಯ್ಯನವರು ಹೆಚ್ಚು ಬರೆದಂತೆ ಕಾಣುತ್ತದೆ.

'ಭಾರತದೊಳಗೇನಿಲ್ಲ' ಎಂಬ ಕವಿತೆಯಲ್ಲಿ ವಾಸ್ತವತೆ ಎದ್ದು ಕಾಣುತ್ತದೆ. ಭಾರತದಲ್ಲಿ ಬಡ ಜನತೆಯ ಸ್ಥಿತಿ ಅತ್ಯಂತ ಶೋಚನೀಯ ಹಂತಕ್ಕೆ ಇಳಿದಿರುವುದು ಇಂದಿನ ವಾಸ್ತವತೆಗೆ ಹಿಡಿದ ಕನ್ನಡಿಯಾಗಿದೆ. ನಿಸರ್ಗದ ಶ್ರೀಮಂತಿಕೆಯಿಂದ ಭಾರತ ಸಮೃದ್ಧ ದೇಶ ಬೀಗುವ ಜನರಿಗೇನು ಕಮ್ಮಿಯಿಲ್ಲ. 'ಭಾರತದೊಳಗೇನಿಲ್ಲ' ಎಂದು ಕವಿ ಪ್ರಶ್ನೆ ಮಾಡುತ್ತಲೇ ಇದ್ದವರಿಗೆ ಎಲ್ಲವೂ ಇದೆ ಎನ್ನುತ್ತಾರೆ.

''ಭಾರತದೊಳಗೇನಿಲ್ಲ
ಅಪ್ಸರೆಯರ ನಿಗುವ ಹೆಣ್ಣು
ಗುಡಿಗೋಪುರಕೆಲ್ಲ ಹೊನ್ನು
ಬಂಗಾರವ ಬೆಳೆವ ಮಣ್ಣು
ಭಾರತದೊಳಗೇನಿಲ್ಲ
ಹಣವಿದ್ದವಗೇ ಎಲ್ಲ'' (ಭಾರತದೊಳಗೇನಿಲ್ಲ)[೧೦]

ತಮ್ಮ ಆಸುಪಾಸಿನ ಎಲ್ಲ ವಿದ್ಯಮಾನಗಳಿಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸುವ 'ಗುಣಕ್ಕೆ ಧರ್ಮಸ್ಥಳದ ಬಾಹುಬಲಿ'ಗೆ ಕವನವು ಒಳ್ಳೆ ನಿದರ್ಶನ. ಬಾಹುಬಲಿಗೆ ಜೇನು, ಕಬ್ಬು, ಹಾಲು, ತುಪ್ಪಗಳ ಅಭಿಷೇಕ ಮಾಡುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಬಂದ ಜನರಿಗೆ ಕುಡಿಯಲು ನೀರಿನ ವ್ಯವಸ್ಥೆ ಇರಲಿಲ್ಲ ಎಂಬ ಪತ್ರಿಕಾ ವರದಿಯನ್ನು ಓದಿ ಈ ಕವಿತೆಯನ್ನು ಸಣ್ಣಗುಡ್ಡಯ್ಯ ರಚಿಸಿದ್ದಾರೆ. ಈ ಕವಿತೆಯು ಕುವೆಂಪುರವರ 'ಧರ್ಮಸ್ಥಳ ಕರ್ಮಸ್ಥಳ' ಕವನವನ್ನು ಕೂಡ ನೆನಪಿಸುತ್ತದೆ. ಧರ್ಮದ ಹೆಸರಿನಲ್ಲಿ ಬಡ ಮತ್ತು ಮುಗ್ಧ ಜನರನ್ನು ಸೆಳೆದು ಹಣ ಮಾಡುವ ಧರ್ಮೋದ್ಯಮವನ್ನು ಕವಿತೆ ವಿಡಂಬಿಸುತ್ತದೆ. ಎಲ್ಲವನ್ನು ತ್ಯಾಗ ಮಾಡಿ ವಿರಾಗಿಯಂತೆ ನಿಂತ ಬಾಹುಬಲಿಯನ್ನು ಇಟ್ಟುಕೊಂಡು ಉಳ್ಳವರು ಮಾಡುವ ಆಚರಣೆಗಳನ್ನು ಕವಿತೆ ವಿಷಾದದಿಂದ ಚಿತ್ರಿಸುತ್ತದೆ. ಧರ್ಮಸ್ಥಳದ ಬಾಹುಬಲಿ ವಿಗ್ರಹವನ್ನು ''ಗಳಿಸಿಟ್ಟು ಉಂಡು ಉಳಿದದ್ದರಲ್ಲಿ ಭೋಗಿಗಳು ನಿರ್ಮಿಸಿದ ಯೋಗಿ'' ಎಂದು ಕವಿತೆ ವ್ಯಂಗ್ಯವಾಗಿ ಚಿತ್ರಿಸುತ್ತದೆ. ಬಾಹುಬಲಿಯ ಮಸ್ತಕಾಭೀಷೇಕಕ್ಕೆ ಹೋಗುವ ದಾರಿಯಲ್ಲಿ ಸಮಾಜದಲ್ಲಿ ಇರುವ ಅಸಮಾನತೆಯ ಚಿತ್ರಗಳನ್ನು ಕವಿತೆ ಕಾಣಿಸುತ್ತಾ ಹೋಗುತ್ತಾನೆ. ''ನಿನ್ನ ಧರ್ಮ ಚಕ್ರಾಧಿಪತ್ಯಕ್ಕೆ ಇವುಗಳನೆಲ್ಲ ಸೇರ್ಪಡೆ ಮಾಡಿಕೊಳ್ಳುವೆ ಹೌದೊ?'' ಎಂದು ಕವಿತೆಯ ನಾಯಕ ಬಾಹುಬಲಿಗೆ ಪ್ರಶ್ನಿಸುತ್ತಾನೆ.

ಇಂದಿನ ಮಕ್ಕಳು ಅಡ್ಡದಾರಿ ಹಿಡಿದಿರುವುದನ್ನು ಕುರಿತು ''ಉಪಾಧ್ಯರ ಕಷ್ಟ'' ಕವಿತೆಯಲ್ಲಿ ಕಾಣಬಹುದು. ಯಾಕೆಂದರೆ ಮಕ್ಕಳಿಗೆ ಹೊಡೆಯದೆ ಬಡಿಯದೆ ಕೇವಲ ಮುದ್ದು ಮಾಡಿ ಕಲಿಸುವ ವಿಷಾದ ಈಗಿನ ಪದ್ಧತಿಯ ಪರಿಣಾಮಗಳಿವು. ಮಕ್ಕಳು ಕಲಿಯದಿದ್ದರೆ, ಕುಹಕ ಮಾತು ಮಾತ್ರ ಅಧ್ಯಾಪಕರಿಗೆ. ಕವಿ ಈ ಸ್ಥಿತಿಯನ್ನು ಅನುಭವಿಸಿಯೇ ಬರೆದಿರಬೇಕು.

ಪುಸ್ತಕ ಬಿಚ್ಚಿ ಅಧ್ಯಾಪನ ಆರಂಭಿಸಿದರೆ
ಆಕಳಿಸಿ ವಿಶ್ರಾಂತಿ ಬೇಡುತ್ತವೆ
ರತಿ ವಿಷಯ ಬೋಧಿಸುವಾಗ ಅಂಬೆ
ಗಾಲಿಕ್ಕಿ ಅಳ್ಳಳ್ಳಾಯಿ ಜಪಿಸುವ ಚಾಳಿ
ಶಂಕರ ಸಿದ್ಧಾಂತ ವಿವರಿಸುವಾಗ ಅದರಲ್ಲಿ
ವಿದೂಕ್ಷಕನ ಪಾತ್ರವಿಲ್ಲೆಂಬ ಕೊರಗು[೧೧]

ಹೀಗೆ ಸಮಾಜದ ಅನೇಕ ಕಟು ವಾಸ್ತವಗಳನ್ನು ಸಣ್ಣಗುಡ್ಡಯ್ಯನವರು ತಮ್ಮ ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ.

'ರಾಷ್ಟ್ರಪಿತನಿಗೊಂದು ಕಿವಿ ಮಾತು' ಎಂಬ ಕವಿತೆಯು ಕವಿಗೂ ಗಾಂಧೀಜಿ ಜೊತೆಗೆ ಸಂವಾದ ಮಾಡುವ ವಿನ್ಯಾಸದಲ್ಲಿ ರಚನೆಯಾಗಿದೆ. ಕವಿತೆ 'ತಂದೆ' ಎಂದು ಆರಂಭವಾಗುತ್ತದೆ. ಅವರಿಗೆ ಮಗನು ತೀರಿ ಹೋದ ತಂದೆಗೆ ತನ್ನ ವರ್ತಮಾನದ ದುರಂತಗಳ ಬಗ್ಗೆ ಒಪ್ಪಿಸಿದ ಮಾದರಿ ಇಲ್ಲಿ ಕಾಣುತ್ತದೆ. ಇಡೀ ಪದ್ಯವೂ ವ್ಯಂಗ್ಯ ಮತ್ತು ವಿಡಂಬನೆಗಳಿಂದ ಕೂಡಿದಾಗಿದೆ. ಈ ಕವಿತೆಯ ರಚನೆಗೆ ಬಹುಶಃ ಸಣ್ಣಗುಡ್ಡಯ್ಯನವರು ಗೋಪಾಲಕೃಷ್ಣ ಅಡಿಗರ 'ಪ್ರಾರ್ಥನೆ' ಕವಿತೆಯಿಂದ ಪ್ರೇರಣೆ ಪಡೆದಿರಬಹುದು. ಏಕೆಂದರೆ ಅಲ್ಲಿಯೂ ಪ್ರಭುವನ್ನು ಪ್ರಜೆಯೊಬ್ಬ ಬೇಡುವ ನಾಟಕೀಯ ವಿನ್ಯಾಸವಿದೆ. ಗಾಂಧೀಜಿಯನ್ನು ಒಂದು ಆದರ್ಶದ ಸಂಕೇತವಾಗಿ ಇಟ್ಟುಕೊಂಡು ಅವನ ಮುಂದೆ ವರ್ತಮಾನದ ಸಾಮಾಜಿಕ, ರಾಜಕೀಯ ವಿಷಮತೆಯನ್ನು ವಿವರಿಸುವ ಜಿ.ಎಸ್.ಎಸ್. ಅವರ ಕವಿತೆ ಇಲ್ಲಿ ನೆನಪಾಗುತ್ತದೆ. ಈ ಕವಿತೆಯಲ್ಲಿ ಸಣ್ಣಗುಡ್ಡಯ್ಯನವರು ಪತನಗೊಂಡಿರುವ ಸಮಾಜದ ಕಟು ವಿಮರ್ಶೆ ಇದೆ. ಈ ಕವಿತೆಗೆ ಅಡಿಟಿಪ್ಪಣಿಯಾಗಿ ಕವಿಯು ಕೊಟ್ಟಿರುವ ನಾಲ್ಕು ಘಟನೆಗಳೆಂದರೆ ಅ. ಅಪಹರಿಸಿ ರೈತರಿಗೆ ಬಲಿ ಕೊಟ್ಟದ್ದು, ಆ. ಗಡಿತಕರಾರನ್ನು ಬಗೆಹರಿಸಬೇಕೆಂದು ಚಳುವಳಿಗಾರರು ರೈಲು ಹಳಿಕಿತ್ತಿದ್ದು. ಇ. ರಾಜರು ಹಿಸ್ಸೆಗಾಗಿ ಉಪವಾಸ ಕೂತ ಘಟನೆ. ಈ. ಗುಜರಾತಿನಲ್ಲಿ ನಡೆದ ಕೋಮುಗಲಭೆ. ಈ ನಾಲ್ಕು ಘಟನೆಗಳು ನಮ್ಮ ಸಾಮಾಜಿಕ, ರಾಜಕೀಯ ವಿಷಮತೆಗೆ ಸಾಕ್ಷಿಯಾದಂಥ ಸಂಗತಿ. ಸಣ್ಣಗುಡ್ಡಯ್ಯನವರು ಗಾಂಧೀಜಿ ರಹಿತ ಭಾರತವೂ ಹೇಗೆ ತನ್ನ ಎಲ್ಲ ಆದರ್ಶಗಳನ್ನು ಕಳೆದುಕೊಂಡು ಬರಡಾಗಿದೆ ಎಂಬುದನ್ನು ಇಲ್ಲಿ ಚಿತ್ರಿಸುತ್ತಾರೆ. "ನೀನು ಕಲಿಸಿದ ಶಿಸ್ತು ನಿರ್ಭೀತಿಗಳು ನಮ್ಮ ಮೈ ತೊಡಗಿವೆ" ಎಂಬ ಸಾಲಿನಲ್ಲಿ ಇದರ ನೋವು ವ್ಯಕ್ತವಾಗಿದೆ. ಈ ಎಲ್ಲಾ ದುಗುಡವನ್ನು ನಿವೇದಿಸಿಕೊಂಡ ಬಳಿಕ ಕವಿ ಗಾಂಧೀಜಿಯನ್ನು ಮತ್ತೊಮ್ಮೆ ಭಾರತಕ್ಕೆ ಬರಲು ಆಹ್ವಾನ ಕೊಡುತ್ತಾರೆ.

> "ನೀನೇನಾದರೂ ಈ ನೆಲಕೆ ಮತ್ತೊಮ್ಮೆ ಬಂದರೆ ಈಗಿಲ್ಲಿ ಚಳಿ ಹೆಚ್ಚು
> ದುಪ್ಪಟಿಯ ಬಿಟ್ಟು ಸಮವಸ್ತ್ರ ಧರಿಸಿ ಬಾ
> ಈ ಜನರ ಬೆನ್ನು ಸುಲಭ ಬಗ್ಗುವುದಿಲ್ಲ, ಕೋಲು ಸಾಲುವುದಿಲ್ಲ
> ಅದಕ್ಕಾಗಿ ಕೈಲೊಂದು ಬಿಸಿಯಾದ ಕೋವಿಯನ್ನು ಹಿಡಿದು ಬಾ
> ಮರೆಯದಿರು ತಂದೆ" (ರಾಷ್ಟ್ರಪಿತನಿಗೊಂದು ಮಾತು)[೨೨]

ಇಲ್ಲಿ ಕವಿ ಅವತಾರದ ಕಲ್ಪನೆಯನ್ನು ನಂಬಿದಂತೆ ಕಾಣುತ್ತದೆ. ಭೂಮಿಯು ದುಷ್ಟತನ ಮತ್ತು ಕೇಡುಗಳಿಂದ ತುಂಬಿದಾಗ ಅದನ್ನು ಪರಿಹರಿಸಲು ದೈವಿಕ ಶಕ್ತಿಯೊಂದು ಅವತಾರ ಎತ್ತಿ ಬರುವ ಕಲ್ಪನೆ ವೈದಿಕ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಅದೇ ರೀತಿ ಗಾಂಧೀಜಿಯವನ್ನು ಕವಿ ಶಸ್ತ್ರಧಾರಿಯಾಗಿ

ಮತ್ತೊಮ್ಮೆ ಬರಲು ಆಹ್ವಾನ ನೀಡುತ್ತಾನೆ. ವಿಶೇಷವೆಂದರೆ ಈ ಶಸ್ತ್ರವು ಈವರೆಗೆ ತಿಳಿದಂತೆ ಗಾಂಧಿಯ ಅಹಿಂಸೆ ಪರಿಪಾನೆಯಾಗಿರದೇ ಕೋವಿಯಾಗಿರುವುದು. ಇಡೀ ಕವಿತೆ ಗಾಂಧಿಯ ಕೈಯಲ್ಲಿ ಕೊವಿಯನ್ನು ಕೊಡುವ ವಿಪರ್ಯಾಸದ ಮೂಲಕ ಇದು ಸಮಕಾಲೀನ ಭಾರತದ ಹದಗೆಟ್ಟಿರುವ ವಾಸ್ತವವನ್ನು ಧ್ವನಿಸುತ್ತದೆ.

## ೩.೪. ಎಚ್.ಜಿ.ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ಪ್ರೇಮ

ಪ್ರೇಮವು ಆಧುನಿಕ ಕನ್ನಡ ಕಾವ್ಯದಲ್ಲಿ ಪ್ರಧಾನ ವಸ್ತು ಎಂದು ಹೇಳಬಹುದು. ಅದರಲ್ಲೂ ಬಹುತೇಕ ಕವಿಗಳ ಮೊದಲ ಹಂತದ ಕವಿತೆಗಳು ಪ್ರೇಮ ಕವಿತೆಗಳಾಗಿರುತ್ತವೆ. ನವೋದಯ ಸಂಪ್ರದಾಯದ ಕುವೆಂಪು, ಬೇಂದ್ರೆ, ಕೆ.ಎಸ್.ನರಸಿಂಹಸ್ವಾಮಿ ಅವರು ನಮ್ಮ ಪ್ರಮುಖ ಪ್ರೇಮ ಕವಿಗಳಾಗಿದ್ದಾರೆ. ಕೆ.ಎಸ್.ನ.ಅವರಂತೂ ಪ್ರೇಮ ಕವಿ ಎಂದೇ ಹೆಸರಾಗಿದ್ದಾರೆ. ಇಲ್ಲಿ 'ಪ್ರೇಮ' ಎಂದರೆ ಪ್ರಧಾನವಾಗಿ ಗಂಡು ಹೆಣ್ಣಿನ ಸಂಬಂಧಗಳಲ್ಲಿ ಹುಟ್ಟುವ ಭಾವವಾಗಿದೆ. ಇದು ವಿವಾಹ ಪೂರ್ವಕ್ಕೆ ಸಂಬಂಧಿಸಿರಬಹುದು, ಇಲ್ಲವೇ ವಿವಾಹನಂತರದ ದಾಂಪತ್ಯಕ್ಕೆ ಸಂಬಂಧಿಸಿರಬಹುದು. ಕನ್ನಡ ಪ್ರೇಮ ಕಾವ್ಯದಲ್ಲಿ ಗಂಡು ಹೆಣ್ಣುಗಳ ನಡುವಣ ಕೇವಲ ಪ್ರೇಮದ ಚಿತ್ರಗಳಿಲ್ಲ. ಪ್ರೇಮದ ಜೊತೆಗೆ ಜಗಳ, ಮುನಿಸು, ವಿರಸ, ಆಕ್ರೋಶ, ಹತಾಶೆ ಮುಂತಾದ ಭಾವಗಳ ಇವೆ. ಈ ಹಿನ್ನೆಲೆಯಲ್ಲಿ ಸಣ್ಣಗುಡ್ಡಯ್ಯನವರ ಕವಿತೆಗಳು ಪ್ರೇಮದ ಚಿತ್ರಣವನ್ನು ಪರಿಶೀಲಿಸಬಹುದು.

ಸಣ್ಣಗುಡ್ಡಯ್ಯನವರ ಮೂರು ಕವನ ಸಂಕಲನಗಳಲ್ಲಿ ಪ್ರೇಮಭಾವದ ಕವಿತೆಗಳಿವೆ. ಅದರಲ್ಲೂ ಅವರ ಪ್ರಥಮ ಸಂಕಲನವಾದ 'ಅಭೀಪ್ಸೆ'ಯಲ್ಲಿ ಅತಿ ಹೆಚ್ಚು. ಪ್ರೇಮ ತುಡಿತವುಳ್ಳ ಕವಿತೆಗಳಿವೆ. ನಂತರದ ಎರಡು ಕವನ ಸಂಕಲನಗಳಲ್ಲಿ ಪ್ರೇಮ ಕವಿತಗೆಳ ಸಂಖ್ಯೆ ಕಡಿಮೆಯಾಗುತ್ತಾ ಹೋಗಿವೆ. 'ಅಭೀಪ್ಸೆ'ಯು ಕವಿಯ ತಾರುಣ್ಯದ ಘಟ್ಟದ ಕವಿತೆಗಳನ್ನು ಒಳಗೊಂಡಿರುವುದರಿಂದ ಸಹಜವಾಗಿ ಅಲ್ಲಿ ಪ್ರೇಮ ಕವಿತೆಗಳು ಹೆಚ್ಚಾಗಿ ಕಂಡುಬರುತ್ತವೆ. ಸಣ್ಣಗುಡ್ಡಯ್ಯನವರು ತಮ್ಮ ಬದುಕಿನಲ್ಲಿ ಆದರ್ಶವೆಂದು ಭಾವಿಸಿದ್ದ ಗುರುಗಳಾದ ತೀ.ನಂ.ಶ್ರೀಯವರು ಒಬ್ಬ ಕವಿ ಆಗಿದ್ದವರು ಎನ್ನುವುದು ಇಲ್ಲಿ ಉಲ್ಲೇಖಾರ್ಹವಾಗಿದೆ. ತೀ.ನಂ.ಶ್ರೀಕಂಠಯ್ಯನವರ 'ಒಲುಮೆ' ಸಂಗ್ರಹವೂ ಪ್ರಧಾನವಾಗಿ ಪ್ರೇಮಕವಿತೆ ಗಳನ್ನು ಒಳಗೊಂಡಿದೆ. ಇದು ಸಣ್ಣಗುಡ್ಡಯ್ಯನವರ ಮೊದಲ ಘಟ್ಟದ ಕಾವ್ಯದ ಮೇಲೆ ಪ್ರಭಾವ ಬೀರಿರುವ ಸಾಧ್ಯತೆ ಇದೆ.

ಸಣ್ಣಗುಡ್ಡಯ್ಯನವರ ಪ್ರೇಮ ಕವಿತೆಗಳಲ್ಲಿ 'ಪ್ರೇಮ'ವು ಗಾಢವಾಗಿ ಕಾಡುವ ಭಾವವಾಗಿಲ್ಲ. ಇಲ್ಲವೇ ಇದು ತಿರಸ್ಕಾರಕ್ಕೆ ಒಳಗಾದ ಸಂಗತಿಯಾಗಿಲ್ಲ. ಇದರ ಬದಲಿಗೆ ಇದು ಬದುಕಿನಲ್ಲಿ ಎದುರಾಗುವ ಅಥವಾ ಅನುಭವಿಸುವ ಅತ್ಯಂತ ಸಹಜ ಭಾವವೆನ್ನುವಂತೆ ಮೂಡಿಬರುತ್ತದೆ.

ಸಣ್ಣಗುಡ್ಡಯ್ಯನವರ ಕಾವ್ಯದಲ್ಲಿ ತೀರ ಅಪರಿಚಿತ ಎನ್ನುವ ವ್ಯಕ್ತಿಗಳಲ್ಲಿ ಹುಟ್ಟುವ ಅತಿ ಪರಿಚಿತ ಎನ್ನುವಂತೆ ಕಾಡುವ ಪ್ರೇಮದ ಬಗ್ಗೆ ಒಂದು ವಿಸ್ಮಯ ಇದ್ದಂತಿದೆ. ಕೆಲವು ಕಡೆ ಪ್ರಿಯತಮೆಯನ್ನು ಕುರಿತು ತೀವ್ರತರವಾದ ಕಾತರ, ತವಕ, ಹಪಾಹಪಿತನ ಕಂಡುಬಂದರೂ ಅದು ಎಲ್ಲಿಯೂ ಅಶ್ಲೀಲದ ಮೇರೆ ಮೀರುವುದಿಲ್ಲ. ಬದಲಿಗೆ ಒಂದು ಮಧುರ ಭಾವವಾಗಿ ಚಿತ್ರಣಗೊಳ್ಳುತ್ತದೆ. ಇದಕ್ಕೆ 'ನಿನ್ನ ಸ್ಮರಣೆ', 'ಇವಳು ಹೊರಟಾಗ', 'ಅವಳಿಗೊಂದು ಪ್ರತಿಭಟನಾ ಪತ್ರ', 'ಬಾಳ ಬೆಳದಿಂಗಳು', 'ಕಣ್ಮರೆಯಾದ ಕಾದಲೆ', 'ಬಿಗಿದ ತೋಳನು ಸಡಿಲಗೊಡಲಾರೆ', 'ನಿನ್ನ ತುಟಿಯೆ ಸಾಕು' ಇತ್ಯಾದಿ ಕವಿತೆಗಳು ಸಾಕ್ಷಿಯಾಗಿವೆ. ಸಣ್ಣಗುಡ್ಡಯ್ಯನವರ ಸಾಮಾಜಿಕ ಕಾಳಜಿಗಳು ಮತ್ತು ರಾಜಕೀಯ ಪ್ರತಿಕ್ರಿಯೆಗಳು ಅವರ ಎರಡು ಮತ್ತು ಮೂರನೆಯ ಸಂಕಲನಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಮೊದಲನೆ ಸಂಕಲನದಲ್ಲಿ ವೈಯಕ್ತಿಕ ಪ್ರೇಮ, ವಿರಹ, ದುಗುಡು, ನಿರಾಶೆ ಮೊದಲಾದ ಭಾವಗಳು ಪ್ರಮುಖವಾಗಿ ಕಂಡುಬರುತ್ತವೆ. ಕಾವ್ಯ ಶಕ್ತಿಯ ದೃಷ್ಟಿಯಿಂದ ಸಣ್ಣಗುಡ್ಡಯ್ಯನವರ ಮೊದಲ ಘಟ್ಟದ ಕವಿತೆಗಳು ಹೆಚ್ಚು ಶಕ್ತವಾಗಿವೆ. ಮತ್ತು ಕಡಿಮೆ ವಾಚ್ಯವನ್ನು ಹೊಂದಿವೆ. ಇದಕ್ಕೆ ಕಾರಣ ಕವಿ ಇಲ್ಲಿ ಹೆಚ್ಚು ಅಂತರ್ಮುಖಿಯಾಗಿರುವುದು. ಈ ಹಿನ್ನೆಲೆಯಲ್ಲಿ ಕವನ ಸಂಕಲನದ ಹೆಸರು('ಅಭೀಪ್ಸೆ') ಪೂರಕವಾಗಿದೆ.

'ಅವಳಿಗೊಂದು ಪ್ರತಿಭಟನಾ ಪತ್ರ'ವು ಸಣ್ಣಗುಡ್ಡಯ್ಯನವರ ಪ್ರೇಮ ಕವಿತೆಗಳಲ್ಲಿ ಅತ್ಯಂತ ಚಮತ್ಕಾರಿಕವಾದುದಾಗಿದೆ. ಈ ಕವಿತೆಯು 'ವೀಸಿ'ಯವರ 'ಪತ್ರದೂತ' ಪ್ರಬಂಧದ ದಾಟಿಯನ್ನು ನೆನಪಿಸುವಂತಿದೆ. ಸಣ್ಣಗುಡ್ಡಯ್ಯನವರ ಕವಿತೆಗಳಲ್ಲಿ ನವೋದಯ ಸಾಹಿತ್ಯದ ಅತ್ಯಂತ ಶ್ರೇಷ್ಠ ಬರಹಗಳ ಪ್ರಭಾವವನ್ನು ನೋಡಬಹುದು. ಆದರೆ ಅದು ಅನುಕರಣೆಯಾಗಿಲ್ಲ. ಬದಲಾಗಿ ಪ್ರಭಾವವನ್ನು ಜೀರ್ಣಿಸಿಕೊಂಡು ಹೊಸ ಸೃಷ್ಟಿಯಾಗಿದೆ. 'ಅವಳಿಗೊಂದು ಪ್ರತಿಭಟನಾ ಪತ್ರ' ಕವಿತೆಯನ್ನು ಈ ದೃಷ್ಟಿಯಿಂದ ಗಮನಿಸಬಹುದು. ಇದರಲ್ಲಿ ಹೆಂಡತಿಯನ್ನು ಬಿಟ್ಟು ಇರುವ ತರುಣ ಗಂಡನ ಎಲ್ಲ ಬಗೆಯ ತಳಮಳ, ಕೋಪ, ಪ್ರೇಮಗಳ ಸಂಕೀರ್ಣ ಭಾವಗಳಿವೆ. ಪ್ರೇಮಕವಿತೆಗಳಲ್ಲಿ ಸಣ್ಣಗುಡ್ಡಯ್ಯನವರು 'ಅವಳಿಗೊಂದು ಪ್ರತಿಭಟನಾ ಪತ್ರ'ದಂಥ ದೀರ್ಘ ಕವಿತೆಗಳನ್ನು ಬರೆಯುತ್ತಾರೆ. ಹಾಗೆಯೇ 'ಇವಳು ಹೊರಟಾಗ' ಆಯ್ಕೆ ಮಾದರಿಯ ಚಿಕ್ಕ ಕವಿತೆಗಳನ್ನೂ ಬರೆಯುತ್ತಾರೆ.

"ಈಗ ಬೇಡಂದರೂ ಹೋಗೆ ಹೋಗುವೆನೆಂದು
ಊರಿಗೊ'ರಟಳು;
ರೈಲು ಸಿಳ್ಳೆಯ ಹಾಕಿ 'ಹೋಗಿ ಬರುವೆಯ ಪದುಮ!'
ಎಂದವರ ಮುಖ ಕಂಡು,
ಬೀಸಿ ಬಿಸಿಲಿಗೆ ಎಸೆದ ಮೀನು ಮರಿಯಂತಾಗಿ

ತೌರ ಮರೆತಳು!

ಪದುಮ ತೌರ ತೊರೆದಳು'' (ಇವಳು ಹೊರಟಾಗ)[೧೩]

ಈ ಕವಿತೆಯು ತನ್ನ ಸಂಕ್ಷಿಪ್ತತೆಯಲ್ಲಿಯೇ ಅತ್ಯಂತ ಧ್ವನಿಪೂರ್ಣವಾಗಿ ಗಂಡ ಹೆಂಡತಿಯರ ಪ್ರೇಮದ ಗಾಢತೆಯನ್ನು ಧ್ವನಿಸುತ್ತದೆ. 'ಬೀಸಿ ಬಿಸಿಲಿಗೆ ಎಸೆದ ಮೀನುಮರಿ' ಎಂಬುದು ಕನ್ನಡ ಪ್ರೇಮ ಕಾವ್ಯಗದಲ್ಲೇ ಅಪರೂಪದ ಉಪಮೇಯವಾಗಿದೆ. 'ತೌರ ಮರೆತಳು! ಪದುಮ ತೌರ ತೊರೆದಳು' ಎಂಬ ಸಾಲು ಅತ್ಯಂತ ನಾಟಕೀಯವಾಗಿ ಅವರಿಬ್ಬರ ಪ್ರೇಮವನ್ನು ಸೂಚಿಸುತ್ತದೆ. ಈ ಪುಟ್ಟ ಕವಿತೆಯಲ್ಲಿ ಮೂರು ಬಗೆಯ ಅಗಲಿಕೆಗಳಿವೆ. ಮೊದಲನೆಯದು ಗಂಡನನ್ನು ಬಿಟ್ಟು ಅಗಲುತ್ತಿರುವ ಹೆಣ್ಣು. ಎರಡನೆಯದು 'ಹೋಗಿ ಬರುವೆಯ' ಎಂಬ ಗಂಡನ ಮಾತಿಗೆ ನೀರಿನಿಂದ ಅಗಲಿದಂತಾದ ಮೀನು, ಮೂರನೆಯದು ತನ್ನ ಗಂಡನ ಪ್ರೀತಿಗಾಗಿ ತನ್ನ ತೌರು ಮನೆಯನ್ನು ಅಗಲುವ ಹೆಣ್ಣು. ಹೀಗೆ ಮೂರು ಬಗೆಯ ಅಗಲಿಕೆಗಳನ್ನು ಮಿಲನದ ಕಾರಣಕ್ಕಾಗಿಯೇ ತಂದು ಜೋಡಿಸುವ ಕವಿತೆ ಅತ್ಯಂತ ಶಕ್ತವಾಗಿದೆ. ಸಣ್ಣಗುಡ್ಡಯ್ಯನವರು ವಾಚಾಳಿಯಾಗದೆ ಆಳವಾದ ಭಾವಗಳನ್ನು ಕಡಿಮೆ ಶಬ್ದಗಳಲ್ಲಿ ಕಂಡರಿಸಬಲ್ಲರು ಎನ್ನುವುದಕ್ಕೆ ಈ ಕವಿತೆ ನಿದರ್ಶನವಾಗಿದೆ.

ಇಲ್ಲಿ ಮತ್ತು ಅವರು ಬರುವಾಗ ಕವಿತೆಯ ನಾಯಕಿ ಪದುಮ ಒಂದು ಸಾಂಕೇತಿಕ ಪಾತ್ರವಾಗಿದೆ. ಈ ಹೆಸರು ಬಹುಶಃ ಬಿ.ಎಂ.ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳು ಸಂಕಲನದ 'ಪದುಮ' ಕವಿತೆ ಸಂಕಲನದಿಂದ ಬಂದಿರುವ ಸಾಧ್ಯತೆ ಇದೆ. ಎ.ಎನ್.ಮೂರ್ತಿರಾಯರ ಲಲಿತ ಪ್ರಬಂಧಗಳಲ್ಲಿ ಬರುವ ಪ್ರೇಮ ಹೆಣ್ಣಿನ ಸಂಕೇತಿಕ ಹೆಸರು 'ಲಲಿತಾ' ಆಗಿರುವಂತೆ ಸಣ್ಣಗುಡ್ಡಯ್ಯನವರ ಕವಿತೆಗಳು ಅದು 'ಪದುಮ' ಆದಂತಿದೆ.

ಸಣ್ಣಗುಡ್ಡಯ್ಯನವರ ಕವಿತೆಗಳಲ್ಲಿ 'ನಿನ್ನ ಸ್ಮರಣೆ' ಕವಿತೆ ಶ್ರೇಷ್ಠವಾದ ಪ್ರೇಮ ಕವಿತೆಯಾಗಿದೆ. ಮುನ್ನುಡಿ ಬರೆದ ಲಕ್ಷ್ಮೀನಾರಾಯಣ ಭಟ್ಟರ ಪ್ರಕಾರ ಇದು ಕವಿಯ ''ಶೈಲಿಯ ಪ್ರಸಾದ ಗುಣಕ್ಕೆ ಒಂದು ಉತ್ತಮ ನಿದರ್ಶನವಾಗಿದೆ.''[೧೪] ಈ ಕವಿತೆಯ ಭಾವವೇಶವಿಲ್ಲದೆ ಪ್ರೇಮದ ಉತ್ಕಟತೆಯನ್ನು ಅಭಿವ್ಯಕ್ತಿ ಮಾಡುತ್ತವೆ.

''ಹೀಗೇಕೆ ಎಂದೆನುತ ನನಗಂತು ಗೊತ್ತಿಲ್ಲ
ಈಗೀಗ ನೀನೆ ನನ್ನೊಳಗು ಹೊರಗೆಲ್ಲ
ಮೆದುಳ ಬಳ್ಳಿಯೊಳೆಲ್ಲ ನಿನ್ನ ಬೆರಳಿನ ಚಲನೆ
ಉಚ್ಛ್ವಾಸ ನಿಶ್ವಾಸದೊಳಗೆಲ್ಲ ನೀನೆ''
''ಧಮನಿ ಧಮನಿಗಳಲ್ಲಿ ನೀನೆ ಧುಮುಕುತ್ತಿರುವೆ
ಎದೆ ಮೃದಂಗದ ಮೇಲೆ ನಿನ್ನ ಕೈ ಬಡಿತ;

ತಪ್ಪು ಸರಿ ಯಾವುದೆಂಬುದು ನನಗೆ ತಿಳಿದಿಲ್ಲ
ಮೈಮೇಲೆ ಬಂದ ಭಕ್ತನೆ ನಾನು? ಅಲ್ಲ." (ನಿನ್ನಸ್ಮರಣೆ)[೧೫]

ಈ ಕವಿತೆಯು ಮಡದಿಯಿಂದ ಅಗಲಿದ ತರುಣ ಪತಿಯ ಆಪ್ತನಾದ ನೆನಪುಗಳಲ್ಲಿ ಹುಟ್ಟಿದೆ. 'ಹೀಗೇಕೆ ಎಂದೆನುತ ನನಗಂತು ಗೊತ್ತಿಲ್ಲ' ಎನ್ನುವಲ್ಲಿ ಇರುವ ಸರಳತೆಯ ಕವಿತೆಯ ನಾಯಕನ ಮುಗ್ಧತೆಯನ್ನು ಸೂಚಿಸುತ್ತವೆ. 'ಮೆದುಳ ಬಳ್ಳಿಯೊಳೆಲ್ಲ ನಿನ್ನ ಬೆರಳಿನ ಚಾಲನೆ' ಎಂಬುದು ಕನ್ನಡ ಪ್ರೇಮಕಾವ್ಯದ ಅಪೂರ್ವ ಚಿತ್ರಗಳಲ್ಲಿ ಒಂದಾಗಿದೆ. ಇಡೀ ಕವಿತೆಯಲ್ಲಿ ಕವಿತೆಯ ನಾಯಕನಿಗೆ ತನ್ನ ಪ್ರೇಮವನ್ನು ಖಚಿತ ಮಾತುಗಳಲ್ಲಿ ವರ್ಣಿಸಲು ಆಗುತ್ತಿಲ್ಲ. 'ನನಗಂತು ಗೊತ್ತಿಲ್ಲ. ನನಗೆ ತಿಳಿದಿಲ್ಲ' ಮುಂತಾದ ಮಾತುಗಳು ಇದಕ್ಕೆ ಸಾಕ್ಷಿ. ಒಂದು ಕಡೆ ಕವಿತೆಯ ನಾಯಕನು ತನ್ನನ್ನು ಹಸುಮಗುವಿಗೆ ಹೋಲಿಸಿಕೊಳ್ಳುತ್ತಾನೆ. ಇಡೀ ಕವಿತೆ ಪ್ರೇಮದ ಅತ್ಯಂತಿಕ ಭಾವದಿಂದ ಹುಟ್ಟಿದೆ.

"ಹಗಲೆಲ್ಲ ಕಿವಿಯ ಬಳಿ ನಿನ್ನ ಕಾಲಿನ ಗೆಜ್ಜೆ
ಇರುಳು ಹಾಸಿನ ಮೇಲೆ ಹೊನ್ನು ಹೆಜ್ಜೆ;
ಬೆಳಗು ಹಾಸುಗೆ ಸುತ್ತುವಾಗ ಬರುವುದು ನೆನಪು,
ಸಂಜೆ ಮುಗಿಲೆಲ್ಲಕೂ ಕೆನ್ನೆಗಳ ಕೆಂಪು" (ನಿನ್ನ ಸ್ಮರಣೆ)[೧೬]

ಸರಳವಾದ ಅಚ್ಚಗನ್ನಡ ಶಬ್ಧದಿಂದ ತುಂಬಿದ ಈ ಕವಿತೆ ಕನ್ನಡದ ಅಪೂರ್ವ ಪ್ರೇಮ ಪದ್ಯಗಳಲ್ಲಿ ಒಂದಾಗಿವೆ. ಮೇಲಿನ ಪದ್ಯ ಭಾಗದಲ್ಲಿ ಒಂದೇ ಒಂದು ಸಂಸ್ಕೃತ ಶಬ್ದಗಳಿಲ್ಲ. ಸರಳವಾದ ಅಚ್ಚಗನ್ನಡ ಶಬ್ದ. ೧೯೬೧ರಲ್ಲಿ ರಚನೆಗೊಂಡಿರುವ ಈ ಕವಿತೆಯು ಕೆ.ಎಸ್ .ನರಸಿಂಹಸ್ವಾಮಿಯವರ ಪ್ರೇಮ ಕವಿತೆಗಳನ್ನು ನೆನಪಿಸುವಂತೆ ತೋರುತ್ತದೆ. ಆದರೂ ಇದು ಸಣ್ಣಗುಡ್ಡಯ್ಯನವರ ಕಾವ್ಯಸ್ಪಂತಿಕೆಯನ್ನು ಪಡೆದು ಹುಟ್ಟಿರುವ ಕವಿತೆಯಾಗಿದೆ.

ಸಣ್ಣಗುಡ್ಡಯ್ಯನವರ ಪ್ರೇಮ ಕವಿತೆಗಳಲ್ಲಿ ಒಬ್ಬ ಸಂತೃಪ್ತ ಗೃಹಸ್ಥನ ಮನಸ್ಥಿತಿಯಿದೆ. ಇದೇ ಕಾಲಘಟ್ಟದಲ್ಲಿ ಬರುತ್ತಿದ್ದ ನವ್ಯ ಕವಿತೆಗಳ ಪ್ರೇಮಕಾಮದ ಚಿತ್ರಣವನ್ನು ಜೊತೆಗಿಟ್ಟು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ನವ್ಯ ಕವಿಗಳು ಗಂಡು ಹೆಣ್ಣಿನ ಸಂಬಂಧವನ್ನು ಚಿತ್ರಿಸುವಾಗ ಕಾಮದ ಅನುಭವವನ್ನು ದೇಹದ ಪ್ರಧಾನವಾದ ಅನುಭವವನ್ನಾಗಿ ಚಿತ್ರಿಸುತ್ತಾರೆ. ಆದರೆ ನವೋದಯ ಪರಂಪರೆಗೆ ಸೇರಿದ ಸಣ್ಣಗುಡ್ಡಯ್ಯನವರಲ್ಲಿ ಪ್ರೇಮವು ಭಾವ ಪ್ರಧಾನವಾಗಿದೆ. ಇದಕ್ಕೆ ಉದಾಹರಣೆಯೆಂದರೆ ಪಾಂಡು-ಮಾದ್ರಿಯರ ಸಂಬಂಧವನ್ನು ಒಳಗೊಂಡಿರುವ ಸಣ್ಣಗುಡ್ಡಯ್ಯನವರ 'ನಾಲ್ಕು ದಿನಗಳ ಸತ್ತೆ' ಮತ್ತು ರಾಮಚಂದ್ರ ಶರ್ಮರವರ 'ಪಾಂಡು-ಮಾದ್ರಿ' ಕವಿತೆಗಳು. ಶರ್ಮರ ಕವಿತೆಗಳಲ್ಲಿ ಪ್ರೇಮ ಕಾಮಗಳ ಆಚೆ ಸಾವಿನ ಚಿಂತನೆಯು ಲಗತ್ತಾಗಿದೆ. 'ನಾಲ್ಕು ದಿನಗಳ ಸತ್ತೆ' ಕವಿತೆಯಲ್ಲಿಯೂ ಸಾವಿನ ಪ್ರಸ್ತಾಪ ಬರುತ್ತದೆ. ಆದರೆ ಶರ್ಮರ ಕವಿತೆಯು ಪ್ರೇಮಕಾಮದ ಜತೆಗೆ ಅನಿವಾರ್ಯವಾಗಿ ಅಂಟಿರುವ ಸಾವಿನ ದುರಂತದ ಬಗ್ಗೆ, ಗಾಢವಾದ ವಿಷಾದ ಮತ್ತು ದುಗುಡವನ್ನು ವ್ಯಕ್ತಪಡಿಸುತ್ತದೆ. ಆದರೆ

ಸಣ್ಣಗುಡ್ಡಯ್ಯನವರ ಕವಿತೆಯು ಸಾವಿನ ಅನಿವಾರ್ಯತೆಯಲ್ಲೇ ಬದುಕನ್ನು ಉತ್ಕಟವಾಗಿ ಅನುಭವಿಸುವ ಧನಾತ್ಮಕ ಚಿಂತನೆಯನ್ನು ಒಳಗೊಂಡಿದೆ.

"ಸತಿಯನಪ್ಪಿದ ಕ್ಷಣವೆ ಮೃತಿ ತನಗೆ ಬಹುದೆಂದು
ಪಾಂಡು ತಿಳಿಯದೆ ಇದ್ದನೇನು ಹೇಳು?
ತನ್ನ ನಲ್ಲೆಯನಲ್ಲದಿನ್ನಾರನಪ್ಪಬೇಕಾಗಿತ್ತು?
ಅಪ್ಪದೆಯೆ, ದೂರ, ದಿನವು ಸಾಯ್ವುದಕಿಂತ
ಅಪ್ಪಿ ಸಾಯ್ವುದೆ ಲೇಸು ಒಂದೆ ಒಂದೆ ಸಾರಿ.
ಸತ್ತರೇನಂತೆ?
ಬೇಗ ತೀರಿತು ಶಾಪ;
ಮರುಜನ್ಮವಿಲ್ಲವೇ ಆಡಿ ನಲಿಯುವುದಕ್ಕೆ?
'ಇಲ್ಲ' ಎನ್ನುವೆಯೇನು? ಸರಿಬಿಡು ಹೋಗಲತ್ತ
ನಾಲ್ಕು ದಿನಗಳ ಸತ್ತೆಗೇಕೆ ಚಿಂತೆ" (ನಾಲ್ಕು ದಿನಗಳ ಸತ್ತೆ)[೭]

ಸಣ್ಣಗುಡ್ಡಯ್ಯನವರ ಪ್ರೇಮಕವಿತೆಯ ಸರಳ ಪ್ರೇಮದ ಆಚೆ ಹೋಗಿ ಬದುಕಿನ ದರ್ಶನವನ್ನು ಒಳಗೊಳ್ಳಲು ಯತ್ನಿಸುತ್ತವೆ. 'ಸಾವು' ಇಲ್ಲಿ ಬದುಕನ್ನು ಮತ್ತಷ್ಟು ತೀವ್ರವಾಗಿ ಅನುಭವಿಸಲು ಒಂದು ಪ್ರೇರಣೆಯಾಗುತ್ತದೆ. 'ನಿನ್ನ ತುಟಿಯೆ ಸಾಕು', 'ಬಿಗಿದ ತೋಳನು ಸಡಿಲಗೊಡಲಾರೆ' ಮುಂತಾದ ಪದ್ಯಗಳು ಕೂಡಾ ಸಣ್ಣಗುಡ್ಡಯ್ಯನವರ ಪ್ರೇಮಕಾವ್ಯದಲ್ಲಿ ಅಡಗಿರುವ ಅಪಾರ ಜೀವನ ಪ್ರೀತಿಯನ್ನು ಸೂಚಿಸುತ್ತವೆ. ಬೇಂದ್ರೆಯವರ ದಾಂಪತ್ಯ ಗೀತೆಗಳಲ್ಲಿ ಗಂಡುಹೆಣ್ಣಿನ ಸಂಬಂಧಗಳು ಬಿಗಡಾಯಿಸಿದ ವಿಷಮ ಚಿತ್ರಗಳಿವೆ. ಕೆ.ಎಸ್ .ನರಸಿಂಹಸ್ವಾಮಿಯವರ ಪ್ರೇಮಕವನಗಳಲ್ಲಿಯೂ ಕೆಲವು ಕಡೇ ಬಾಳಿನ ಹೋರಾಟಗಳಲ್ಲಿ ಪ್ರೇಮವು ಹುಟ್ಟಿ ಬೆಳೆಯುವುದರ ಚಿತ್ರಣವಿದೆ. (ಉದಾ : 'ಇವನು ಹುಟ್ಟಿದ ಹಬ್ಬ' ಕವಿತೆಯಲ್ಲಿ) ಕುವೆಂಪು ಪ್ರೇಮ ಕವಿತೆಗಳಲ್ಲಿ ಭವ್ಯತೆ ಮತ್ತು ದೈವಿಕತೆ ಇದೆ. ಪು.ತಿ.ನ. ಪ್ರೇಮ ಕವಿತೆಗಳಲ್ಲಿ ಪೌರಾಣಿಕಗಳು ಸಾಮಾನ್ಯ ಗಂಡು-ಹೆಣ್ಣುಗಳು ಲೌಕಿಕ ಪ್ರೇಮದ ಪ್ರತಿಬಿಂಬವಾಗಿವೆ. ಸಣ್ಣಗುಡ್ಡಯ್ಯನವರ ಕವಿತೆಯಲ್ಲಿ ಹೆಚ್ಚಿನ ತಾಕಲಾಟಗಳಿಲ್ಲದ ನಿಷ್ಕಲ್ಮಶ ಪ್ರೇಮಲೋಕವೊಂದು ಮೂಡಿಬರುತ್ತದೆ. ಈ ಕಾರಣದಿಂದ ಅವರ ಪ್ರೇಮಕವಿತೆಗಳು ಕನ್ನಡದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿವೆ.

**ಕೊನೆ ಟಿಪ್ಪಣಿಗಳು**

೧. ಎಚ್.ಜಿ.ಸಣ್ಣಗುಡ್ಡಯ್ಯ, ಅಭೀಪ್ಸೆ, ಪು.೨೦

೨. ಎಚ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೧೦

೩. ಎಚ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೫೯

೪. ಎಚ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೧೯

೫. ಎಚ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೦೨

೬. ಎಚ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೧೭

೭. ಎಸ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೧೭

೮. ಎಸ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೪೬

೯. ಎಚ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೪೦

೧೦. ಎಚ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೬೪

೧೧. ಎಚ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೩೮

೧೨. ಎಚ್.ಜಿ.ಸಣ್ಣಗುಡ್ಡಯ್ಯ, ಭಿನ್ನ, ಪು.೫೭

೧೩. ಎಚ್.ಜಿ.ಸಣ್ಣಗುಡ್ಡಯ್ಯ, ವಸಂತದ ಕನಸುಗಳು, ಪು.೩೭

೧೪. ಎಚ್.ಜಿ.ಸಣ್ಣಗುಡ್ಡಯ್ಯ, ಅಭೀಪ್ಸೆ ಪು.೪೧

೧೫. ಎಚ್.ಜಿ.ಸಣ್ಣಗುಡ್ಡಯ್ಯ, ಅಭೀಪ್ಸೆ, ಪು.೪೩

೧೬. ಎಚ್.ಜಿ.ಸಣ್ಣಗುಡ್ಡಯ್ಯ, ಅಭೀಪ್ಸೆ, ಪು.೪೪

೧೭. ಎಚ್.ಜಿ.ಸಣ್ಣಗುಡ್ಡಯ್ಯ, ಅಭೀಪ್ಸೆ, ಪು.೫೨

೪

# ಎಚ್.ಜಿ.ಸಣ್ಣಗುಡ್ಡಯ್ಯವರ ಚಿಂತನೆಯ ಸ್ವರೂಪ

**ಪೀಠಿಕೆ**

ಕನ್ನಡ ಲಲಿತ ಪ್ರಬಂಧಗಳ ಒಂದು ಪ್ರಧಾನ ಲಕ್ಷಣವೆಂದರೆ ಚಿಂತನ ಶೀಲತೆ, ಕಥೆ ಮತ್ತು ಕಾವ್ಯ, ಕಾದಂಬರಿಗಳಲ್ಲಿ ಸಹ ಚಿಂತನಶೀಲತೆ ಇರುತ್ತದೆ. ಆದರೂ ಅವು ಮುಖ್ಯವಾಗಿ ಅನುಭವ ಪ್ರಧಾನ ಮತ್ತು ಭಾವ ಪ್ರಧಾನವಾದ ಪ್ರಕಾರಗಳು. ಲಲಿತ ಪ್ರಬಂಧವು ಅನುಭವ, ಭಾವ, ಕಲ್ಪನಾಶಕ್ತಿ ಮತ್ತು ವಿಚಾರಗಳನ್ನು ಸಮಾನವಾಗಿ ಬೆರಸುವ ವಿಶಿಷ್ಟ ಪ್ರಕಾರವಾಗಿದೆ. ಕನ್ನಡದ ಪ್ರಮುಖ ಲಲಿತ ಪ್ರಬಂಧಕಾರರು ನಮ್ಮ ಅತ್ಯುತ್ತಮ ಚಿಂತಕರು ಆಗಿರುವುದು ಗಮನಾರ್ಹ. ಉದಾಹರಣೆಗೆ ಎ.ಎನ್ .ಮೂರ್ತಿರಾವ್ ಕನ್ನಡದ ಶ್ರೇಷ್ಠ ಲಲಿತ ಪ್ರಬಂಧಕಾರರು. ಹಾಗೆಯೇ ಅವರು ಕನ್ನಡದ ಮಹತ್ವದ ಚಿಂತಕರೂ ಕೂಡ. ವಿ.ಸೀ. ಅವರು ಕನ್ನಡದ ಪ್ರಸಿದ್ಧ ಲಲಿತ ಪ್ರಬಂಧಕಾರರಾಗಿರುವಂತೆಯೇ ಚಿಂತನ ಶೀಲ ಲೇಖಕರೂ ಆಗಿದ್ದಾರೆ. 'ಮಲೆನಾಡಿನ ಚಿತ್ರಗಳು' ಸಂಕಲನದಲ್ಲಿ ಲಲಿತ ಪ್ರಬಂಧಗಳನ್ನು ಬರೆದಿರುವ ಕುವೆಂಪು ಕನ್ನಡ ಶ್ರೇಷ್ಠ ವಿಚಾರವಾದಿಯೂ, ಚಿಂತಕರು ಆಗಿರುವುದನ್ನು ಇಲ್ಲಿ ನೆನೆಯಬಹುದು. ಈ ಹಿನ್ನೆಲೆಯಲ್ಲಿ ಎಚ್.ಜಿ.ಸಣ್ಣಗುಡ್ಡಯ್ಯನವರು ಮೇಲೆ ಕಾಣಿಸಿದ ಪರಂಪರೆಯನ್ನು ಮುಂದುವರಿಸುವ ಕೆಲಸ ಮಾಡುತ್ತಾರೆ. ಅವರ ಪ್ರಬಂಧಗಳಲ್ಲಿ ಅನುಭವ ಲೋಕದಷ್ಟು ಮುಖ್ಯವಾದ ಸಂಗತಿ ಎಂದರೆ ಅವರ ವೈಚಾರಿಕತೆ. ಅವರ ವೈಚಾರಿಕತೆಗೆ ಹಲವು ಕಾರಣಗಳಿವೆ. ಒಂದು ಅವರು ಅಧ್ಯಾಪಕರಾಗಿದ್ದು, ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಭಾವವನ್ನು ಉಂಟು ಮಾಡಬೇಕಾದ ಕೆಲಸ ನಿರ್ವಹಿಸಿದ್ದು, ಎರಡನೆಯದು ಸಮಾಜವಾದಿಯೂ ಎಡಪಂಥಿಯ ಚಿಂತಕರೂ ಆಗಿದ್ದ ಅವರಿಗೆ ಸಹಜವಾಗಿ ವೈಚಾರಿಕತೆಯೂ ಒಂದು ಮುಖ್ಯ ಸಂಗತಿಯಾಗಿದ್ದು; ನಮ್ಮ ಸಮಾಜದ ಕಾಡುಗಳ ಮೇಲೆ ವಿಮರ್ಶೆ ಮಾಡುವ ಸ್ವಭಾವವುಳ್ಳ ಎಲ್ಲ ಬರಹಗಾರರು ಚಿಂತನಶೀಲರಾಗಲೇಬೇಕಾದ ಅಗತ್ಯ ಇದೆ. ಸಣ್ಣಗುಡ್ಡಯ್ಯ ನವರ ಪ್ರಬಂಧಗಳಲ್ಲಿ ನಮ್ಮ ಸಮಾಜದ ಸಮೃದ್ಧಿಯನ್ನು ಹೇಳುವ ಭಾಗಗಳಿಗಿಂತ ಅರೆಕೊರೆಗಳ ವಿಮರ್ಶೆಯೇ ಪ್ರಧಾನವಾಗಿರುವುದನ್ನು ಗಮನಿಸಬಹುದು. ಇದಕ್ಕೆ ಅವರ ಕಾವ್ಯವು ಹೊರತಾಗಲ್ಲ. ವಿಶೇಷವೆಂದರೆ ಸಣ್ಣಗುಡ್ಡಯ್ಯನವರ ವೈಚಾರಿಕತೆಯ ಚಿಂತನೆಯ ಸ್ವರೂಪವನ್ನು ಪಡೆದುಕೊಳ್ಳುವ ಹಂತವನ್ನು ದಾಟಿ ಜೀವನದ ಮೂಲಭೂತ ತತ್ವಗಳ ಮೇಲೆ ಬೆಳಕು ಚೆಲ್ಲುವ ದರ್ಶನ ಹಂತವನ್ನು

ಮುಟ್ಟುವುದು. ಈ ಅರ್ಥದಲ್ಲಿ ಅವರು ಕೇವಲ ಚಿಂತಕರಲ್ಲ. ಒಬ್ಬ ದಾರ್ಶನಿಕ ಚಿಂತಕ ಎಂದು ಹೇಳಬಹುದು. ಈ ವಿಷಯದಲ್ಲಿ ಟಿ.ಎಸ್.ಲೋಹಿತಾಶ್ವ ಅವರು ಹೀಗೆ ಹೇಳುತ್ತಾರೆ. ''ಯಾವುದೇ ಒಂದು ನಿರ್ದಿಷ್ಟವಾದ ಸಿದ್ಧಾಂತಕ್ಕಾಗಲೀ, ಪೂರ್ವ ನಿಯೋಜಿತ ಶಿಸ್ತಿಗಾಗಲೀ, ದೃಢೀಕರಿಸಲ್ಪಟ್ಟ ಸತ್ಯಗಳಿಗಾಗಲೀ, ಕಟ್ಟುಬೀಳದೆ, ಬದುಕಿನ ದಾರಿಯಲ್ಲಿ ಕವುಚಿ ಬಿದ್ದ ಸಂಕೀರ್ಣಗಳು ತಮಗೆ ತಾವೇ ಸರಳವಾಗಿ ಬಿಡುವ ಸಿದ್ಧಾಂತ, ಶಿಸ್ತು, ಸತ್ಯಗಳಾಗಿ ಪರಿವರ್ತಿತವಾಗಿ ಬಿಡುವ ಚೋದ್ಯಕ್ಕೆ ಲೇಖಕರ ಬದುಕಿನ ಪ್ರಾಮಾಣಿಕತೆ ಬರಹದುದಕ್ಕೂ ಜಿನುಗಿರುವುದು ಕಾರಣವಾಗಿದೆ. ಇಲ್ಲಿ ಯಾವ ಪ್ರಬಂಧವೂ ಬರೆದದ್ದಲ್ಲ, ಆದದ್ದು''.[೧]

ಸಣ್ಣ ಗುಡ್ಡಯ್ಯನವರ ಪ್ರಬಂಧಗಳಲ್ಲಿ ಇರುವ ಚಿಂತನೆಯ ಎರಡು ಮುಖಗಳಿವೆ. ಮೊದಲನೆಯದಾಗಿ ಜೀವನದ ನಾನ ಮುಖಗಳನ್ನು ಮತ್ತು ಸಮಾಜದ ಬೇರೆ ಬೇರೆ ಕ್ಷೇತ್ರಗಳನ್ನು ಕುರಿತು ಅವರು ಚಿಂತನೆ ಮಾಡುವುದು. ಅದು ಆರೋಗ್ಯ ಸಮಾಜದ ಅಸಮಾನತೆ, ಹೆಣ್ಣಿನ ದುಸ್ಥಿತಿ, ಬಡತನ, ದುಶ್ಚಟಗಳು, ರಾಜಕಾರಣ, ಮೂಢನಂಬಿಕೆ, ಮತೀಯವಾದ, ಸಾರ್ವಜನಿಕ ಬದುಕಿನಲ್ಲಿರುವ ಭ್ರಷ್ಟಚಾರ, ಅಶಿಸ್ತು, ಕೊಳಕುತನ ಇತ್ಯಾದಿ ಸಂಗತಿಗಳನ್ನು ಕುರಿತು ಸಣ್ಣಗುಡ್ಡಯ್ಯನವರು ಚಿಂತನೆ ಮಾಡುತ್ತಾರೆ. ಎರಡನೆಯದಾಗಿ ಲೇಖಕರು ಮೂಲತಃ ಒಬ್ಬ ಆದರ್ಶವಾದಿಯೂ ಸಮಾಜವಾದಿಯೂ ಆಗಿರುವ ಕಾರಣ ಎಲ್ಲ ಬಗೆಯ ತಾರತಮ್ಯ, ಅನ್ಯಾಯ, ಅಸಮಾನತೆಗಳ ವಿರುದ್ಧ ಆಕ್ರೋಶದಿಂದ ಪ್ರತಿಕ್ರಿಯಿಸುತ್ತಾರೆ. ಹೀಗೆ ಸಣ್ಣಗುಡ್ಡಯ್ಯನವರ ಒಟ್ಟು ಚಿಂತನೆಯ ಹಿಂದೆ ಭಾರತದ ಎಲ್ಲ ದೊಡ್ಡ ಚಿಂತಕರ ಹಿನ್ನೆಲೆ ಇರುವುದನ್ನು ಗಮನಿಸಬಹುದು. ಅವರೊಬ್ಬ ಅಪಾರ ಓದಿನ ವಿದ್ವಾಂಸರು ಆಗಿದ್ದುದು ಅವರ ಚಿಂತನೆಗೆ ಒಂದು ಗಟ್ಟಿತನ ಒದಗಿಸಿದೆ. ಮುಖ್ಯವಾಗಿ ಕುವೆಂಪು ಅವರ ಚಿಂತನೆಯ ಹಿಂದಿನ ಮುಖ್ಯ ಪ್ರೇರಕರು ಎಂದು ಅನಿಸುತ್ತದೆ.

ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ವೈಚಾರಿಕ ಚಿಂತನೆಗಳು ಪೂರಕವಾಗಿ ಬಂದಿರುವುದನ್ನು ನೋಡುತ್ತೇವೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ಲಲಿತ ಪ್ರಬಂಧಗಳನ್ನು ಇಟ್ಟುಕೊಂಡು ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಪ್ರಾಸಂಗಿಕವಾಗಿ ಲೇಖನದಲ್ಲಿ ಬಂದಿರುವ ವಿಷಯಗಳನ್ನು ಇಟ್ಟುಕೊಂಡು ಚರ್ಚೆ ಮಾಡಲಾಗಿದೆ. ಸಣ್ಣಗುಡ್ಡಯನವರ ವೈಚಾರಿಕ ಚಿಂತನೆಗಳನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ಕೊಂಡು ಚರ್ಚಿಸಬಹುದು.

೧. ರಾಜಕೀಯ ಚಿಂತನೆಗಳು
೨. ಧಾರ್ಮಿಕ ಚಿಂತನೆಗಳು
೩. ಜೀವನ ಚಿಂತನೆಗಳು

೧. ರಾಜಕೀಯ ಚಿಂತನೆಗಳು

ಸಣ್ಣಗುಡ್ಡಯ್ಯನವರು 'ಏಕಾಂತ ಮತ್ತು ಇತರ ಪ್ರಬಂಧಗಳು' ಸಂಕಲನದಲ್ಲಿ ಹೆಚ್ಚು ಅನುಭವ ಪ್ರಧಾನವಾದ ಪ್ರಬಂಧಗಳನ್ನು ಬರೆಯುತ್ತಾರೆ. 'ಹದ್ದು ಮತ್ತು ಇತರ ಪ್ರಬಂಧಗಳು' ಸಂಕಲನದಲ್ಲಿ ಹೆಚ್ಚು ವಿಚಾರ ಪ್ರಧಾನವಾದ ಪ್ರಬಂಧಗಳನ್ನು ಬರೆಯುತ್ತಾರೆ. ಅವರ ವಿಚಾರ ಪ್ರಧಾನ ಪ್ರಬಂಧಗಳನ್ನು ಲಲಿತ ಪ್ರಬಂಧಗಳು ಎನ್ನುವುದಕ್ಕಿಂತ ವೈಚಾರಿಕ ಲೇಖನಗಳು ಎಂದು ಕೂಡ ಕರೆಯಬಹುದು. ಇದಕ್ಕೆ ಸಾಕ್ಷಿ ನಿರ್ಮಲ ಕರ್ನಾಟಕ', 'ಮುಂದೇನು?', 'ಬೆಲೆ', 'ಚುನಾವಣೆ' ಮುಂತಾದವು. ಈ ನಾಲ್ಕು ಪ್ರಬಂಧಗಳಲ್ಲಿ ಭಾರತದ ದೇಶದ ರಾಜಕಾರಣ, ಅಧಿಕಾರ ಆಡಳಿತ ಮತ್ತು ಪ್ರಜ್ಞೆ ಕುರಿತ ವಿಚಾರಗಳು ವ್ಯಕ್ತವಾಗಿವೆ. ಇಲ್ಲಿ ಲೇಖಕರು ನೇರವಾಗಿ ರಾಜಕೀಯ ಎನ್ನಬಹುದಾದ ಚಿಂತನೆಯನ್ನು ಮಾಡುತ್ತಾರೆ. ಇಲ್ಲಿ ರಾಜಕೀಯ ಎಂದರೆ ಕೇವಲ ಚುನಾವಣೆ ರಾಜಕಾರಣಕ್ಕೆ ಸಂಬಂಧಿಸಿದ ರಾಜಕೀಯವಲ್ಲ. ಬದಲಿಗೆ ಭಾರತದ ರಾಜಕಾರಣವು ಅನುಸರಿಸುತ್ತಿರುವ ಕುರಿತ ಚಿಂತನೆಯಾಗಿದೆ. ಭಾರತದ ಆರ್ಥಿಕ ನೀತಿಗಳ ಕಟುವಾದ ವಿಮರ್ಶೆಯಿದೆ. ಪರ್ಯಾಯವಾಗಿ ಲೇಖಕರು ಮಂಡಿಸುವ ಕಾರ್ಯಕ್ರಮಗಳು ಇವೆ. ಸಣ್ಣಗುಡ್ಡಯ್ಯನವರು ಇಲ್ಲಿ ಒಬ್ಬ ಲೇಖಕನಾಗಿ ಮಾತ್ರ ಕಾಣಿಸಿಕೊಳ್ಳದೆ ಒಬ್ಬ ಅಪಾರ ರಾಜಕೀಯ ಪ್ರಜ್ಞೆಯುಳ್ಳ, ಜವಾಬ್ದಾರಿಯುತ ನಾಗರಿಕವಾಗಿ ಕಾಣಿಸಿಕೊಳ್ಳುತ್ತಾರೆ. ಅವರ ಈ ರಾಜಕೀಯ ಪ್ರಜ್ಞೆಗೆ ಕಾರಣ ಅವರ ಓದು, ಚಿಂತನೆ ಸಮಾಜವಾದ ಮತ್ತು ಎಡಪಂಥೀಯ ನೆಲೆಯಲ್ಲಿ ಪಳಗಿರುವುದೇ ಆಗಿದೆ.

ನಮ್ಮ ದೇಶದ ಸಮಸ್ಯೆಗಳನ್ನು ಕುರಿತು ಗಾಢವಾದ ಅಧ್ಯಯನ ಮತ್ತು ತಿಳುವಳಿಕೆ ಇಟ್ಟುಕೊಂಡು ಚಿಂತನೆ ಮಾಡುವುದರಿಂದ ಸಣ್ಣಗುಡ್ಡಯ್ಯನವರ ರಾಜಕೀಯ ಚಿಂತನೆ ಟೊಳ್ಳಾಗಿ ಕಾಣುವುದಿಲ್ಲ. ಯಾವಾಗಲೂ ನಮ್ಮ ಸಮಾಜದ ಅವಸ್ಥೆಯನ್ನು ಕುರಿತು ಟೀಕಿಸುವುದು ಸುಲಭದ ಕೆಲಸ. ಆದರೆ ಆ ಟೀಕೆ ಆಳವಾದ ಅಧ್ಯಯನ ಮತ್ತು ಚಿಂತನೆಗಳಿಂದ ಕೂಡಿದ್ದರೆ ಮಾತ್ರ ಅದಕ್ಕೊಂದು ಹೊಣೆಗಾರಿಕೆ ಬರುತ್ತದೆ. ಸಣ್ಣಗುಡ್ಡಯ್ಯನವರ ರಾಜಕೀಯ ಚಿಂತನೆಗಳಲ್ಲಿ ಇಂತಹ ಹೊಣೆಗಾರಿಕೆಯನ್ನು ಕಾಣಬಹುದು. ಈ ಹೊಣೆಗಾರಿಕೆ ಸಮರ್ಥವಾಗಿ ಪ್ರಕಟವಾಗುವುದು. ಅವರು ಪರ್ಯಾಯ ಕಾರ್ಯಕ್ರಮಗಳನ್ನು ಸೂಚಿಸುವುದರ ಮೂಲಕ; ಸಣ್ಣಗುಡ್ಡಯ್ಯನವರ ಬರಹಗಳಲ್ಲಿ ಭಾರತದ ಆರ್ಥಿಕ ರಾಜಕಾರಣ(Political Economic) ಕುರಿತು ಅಪಾರವಾದ ತಿಳುವಳಿಕೆ ಕಾಣುತ್ತದೆ. ಇದಕ್ಕೆ ಸಾಕ್ಷಿ ಭಾರತದ ಬೇರೆ ಬೇರೆ ರಾಜ್ಯಗಳ ರಾಜಕೀಯ ನಿದರ್ಶನವನ್ನು ಕೊಡುವುದು; ಅದರಲ್ಲೂ ಅವರು ಅತಿ ಹೆಚ್ಚಾಗಿ ಕೊಡುವುದು ಕೇರಳ ಮತ್ತು ಪಶ್ಚಿಮ ಬಂಗಾಳದ ಉದಾಹರಣೆಗಳನ್ನು ಇವು ಎಡಪಂಥೀಯ ರಾಜಕೀಯ ಪಕ್ಷಗಳ ಆಳ್ವಿಕೆ ನಡೆಸಿದ ರಾಜ್ಯಗಳು ಎಂಬುದು ಗಮನಾರ್ಹ.



ಸಣ್ಣಗುಡ್ಡಯ್ಯನವರ ರಾಜಕೀಯ ಚಿಂತನೆ ಪ್ರಕಟವಾಗುವುದು. ಅವರ ಅಧ್ಯಯನ ತಿಳುವಳಿಕೆಗಳಲ್ಲಿ ಮಾತ್ರ ಅಲ್ಲ. ಅವರು ನಮ್ಮ ಸಮಾಜವನ್ನು ಸುಧಾರಿಸುವ ಕುರಿತು ಪ್ರಕಟಿಸುವ ಕಳಕಳಿಯಲ್ಲಿ ಅವರ

ಇಡೀ ರಾಜಕೀಯ ಚಿಂತನೆಗೆ, ಮಾನವೀಯ ಆಯಾಮ ಒದಗುತ್ತದೆ. ಅಂದರೆ ಜನಸಮುದಾಯಗಳ ಬಗ್ಗೆ ಕಾಳಜಿ, ಸಾಮಾನ್ಯರ ಬದುಕು ಹಸನಾಗಬೇಕು ಎಂಬ ತುಡಿತ ಅವರ ಪ್ರಬಂಧಗಳಲ್ಲಿ ಮಿಡಿಯುವುದನ್ನು ಕಾಣಬಹುದು. ಇದಕ್ಕೆ ಸಾಕ್ಷಿಯಾಗಿ ಅವರು ಚಿಂತನೆಯನ್ನು ನಡೆಸುವ ಕೆಲವು ಕ್ಷೇತ್ರಗಳನ್ನು ಗಮನಿಸಬಹುದು. ಅ. ಕುಡಿಯುವ ನೀರಿನ ಸಮಸ್ಯೆ ಆ. ಶೌಚಾಲಯ ಮತ್ತು ಸ್ವಚ್ಛತೆಯ ಸಮಸ್ಯೆ ಇ. ಗ್ರಾಮೀಣ ಆರ್ಥಿಕತೆಯ ಸಮಸ್ಯೆ ಈ. ಕೈಗಾರಿಕೆ ಮತ್ತು ನಗರೀಕರಣದ ಸಮಸ್ಯೆ.

**ಅ. ಕುಡಿಯುವ ನೀರಿನ ಸಮಸ್ಯೆ :** ಭಾರತದ ರಾಜಕಾರಣವು ದೊಡ್ಡ ಕೈಗಾರಿಕೆಗಳ ಸ್ಥಾಪನೆ, ಹೆದ್ದಾರಿಗಳ ಸ್ಥಾಪನೆ, ವಿಮಾನ ನಿಲ್ದಾಣಗಳ ನಿರ್ಮಿತಿ, ಬೃಹತ್ ಅಣೆಕಟ್ಟುಗಳ ಸ್ಥಾಪನೆ ಇತ್ಯಾದಿ. ಬೃಹತ್ ಯೋಜನೆಗಳನ್ನು ಕುರಿತು ಹೆಚ್ಚು ಗಮನ ಹರಿಸುತ್ತಾರೆ. ಆದರೆ ನಿಜವಾದ ಜನತೆಯ ರಾಜಕಾರಣ ಎನ್ನುವುದು ಪ್ರಕಟವಾಗುವುದು ಸಾಮಾನ್ಯ ಜನರಿಗೆ. ಅದು ಹಮ್ಮಿಕೊಳ್ಳುವ ಕಾರ್ಯಕ್ರಮದ ಮೂಲಕ 'ಹೀಗಾಗಿ ಸಣ್ಣಗುಡ್ಡಯ್ಯನವರ ಸ್ಥಳೀಯವಾಗಿ ಗ್ರಾಮೀಣ ಜನರಿಗೆ, ಮಹಿಳೆಯರಿಗೆ, ಬಡವರಿಗೆ ಉಪಯುಕ್ತವಾಗುವ ಯೋಜನೆಯನ್ನು ಕುರಿತು ಮತ್ತೆ ಮತ್ತೆ ಚಿಂತಿಸುತ್ತಾರೆ. ಅವುಗಳಲ್ಲಿ ಕುಡಿಯುವ ನೀರಿನ ಸಮಸ್ಯೆಯೂ ಒಂದು. ಅವರು ಮತ್ತೆ ಮತ್ತೆ ಈ ಕಾರಣಕ್ಕಾಗಿ ನೆನೆಯುವ ರಾಜಕಾರಣಿ ಎಂದರೆ 'ಜನತಾಪಕ್ಷ' ಸರ್ಕಾರದಲ್ಲಿ ಮಂತ್ರಿಯಾಗಿದ್ದ 'ನೀರ್ ಸಾಬ್' ಎಂದು ಖ್ಯಾತರಾಗಿದ್ದ ನಜೀರ್‌ಸಾಬ್ ಅವರು ಹಳ್ಳಿಯ ಜನರಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸುವ ನಜೀರ್ ಸಾಬ್‌ನು ತೊಡಿಸಿದ ಕೊಳವೆ ಬಾವಿಗಳನ್ನು ಕುರಿತು ಸಣ್ಣಗುಡ್ಡಯ್ಯನವರು ಚರ್ಚಿಸುತ್ತಾರೆ. ಸಾಮಾನ್ಯ ಜನರಿಗೆ ಉಪಯೋಗವಾಗುವ ಆರ್ಥಿಕ ಯೋಜನೆ ಮತ್ತು ರಾಜಕೀಯ ಕಾರ್ಯಕ್ರಮಗಳ ಬಗ್ಗೆ ಲೇಖಕರು ಕಟುವಾಗಿ ಟೀಕಿಸುತ್ತಾರೆ. ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಗ್ರಾಮೀಣ ಪ್ರದೇಶದಿಂದ ಬಂದ ಸಣ್ಣಗುಡ್ಡಯ್ಯನವರಿಗೆ ಇರುವ ಕಾಳಜಿ ಅಪೂರ್ವವಾದುದು. ಅದು ಇಲ್ಲಿನ ರಾಜಕೀಯ ಚಿಂತನೆಗಳಲ್ಲಿ ಒಂದು ತುಡಿತವಾಗಿ ಪ್ರಕಟವಾಗುತ್ತದೆ.

**ಆ. ಶೌಚಾಲಯ ಮತ್ತು ಸ್ವಚ್ಛತೆಯ ಸಮಸ್ಯೆ :** ಸಣ್ಣ ಗುಡ್ಡಯ್ಯನವರು ಮತ್ತೆ ಮತ್ತೆ ಚಿಂತನೆ ನಡೆಸುವ ಸಂಗತಿ ಎಂದರೆ ಸ್ವಚ್ಛತೆ ಮತ್ತು ಶೌಚಾಲಯದ್ದು. ಇದು ಕೂಡ ನಮ್ಮ ಸರ್ಕಾರಗಳು ತಮ್ಮ ಕಾರ್ಯಕ್ರಮಗಳಲ್ಲಿ ಸಾಮಾನ್ಯವಾಗಿ ನಿರ್ಲಕ್ಷಿಸುವ ಸಂಗತಿಯಾಗಿದೆ. ಯಾವುದೇ ಸರ್ಕಾರದ ಅಥವಾ ರಾಜಕೀಯ ಪಕ್ಷದ ಕಾರ್ಯಕ್ರಮಗಳಲ್ಲಿ ಶೌಚಾಲಯದ ಪ್ರಶ್ನೆಯು ಸಹಜವಾಗಿ ಕಾಣಿಸಿಕೊಳ್ಳುವುದಿಲ್ಲ. ಕೈಗಾರಿಕೆ, ನೀರಾವರಿ, ರೈತರ ಸಮಸ್ಯೆ ಇಂಥ ದೊಡ್ಡ ದೊಡ್ಡ ವಿಷಯಗಳಷ್ಟೇ ಅಲ್ಲಿ ಕಾಣಿಸಿಕೊಳ್ಳುವುದು. ಆದರೆ ಲೇಖಕರು ನೋಡಲು ಅತ್ಯಂತ ಚಿಕ್ಕವಾಗಿ ಕಾಣುವ, ಆದರೆ ದೈನಿಕ ಬದುಕಿನಲ್ಲಿ ಅತ್ಯಂತ ಮುಖ್ಯವಾದ ಶೌಚಾಲಯ ಸಮಸ್ಯೆಯನ್ನು ಚರ್ಚಿಸಿದ್ದಾರೆ. ಈ ಸಮಸ್ಯೆಯನ್ನು ನಿಜವಾಗಿ ಎದುರಿಸುತ್ತಿರುವ ಭಾರತದ ಗ್ರಾಮೀಣ ಮಹಿಳೆಯರ ಬಗ್ಗೆ ಅವರ ಕಳಕಳಿ ಇರುವುದು ಇಲ್ಲಿ ಎದ್ದು ಕಾಣುತ್ತದೆ. 'ಶೌಚ'

ಕ್ರಿಯೆಯನ್ನು ಯಾವ ಯಾವ ಬಗೆಯಲ್ಲಿ ತೀರಿಸಿಕೊಳ್ಳಬೇಕು ಎಂಬ ಬಗ್ಗೆ ಅವರ 'ನಿರ್ಮಲ ಕರ್ನಾಟಕ' ಪ್ರಬಂಧದಲ್ಲಿ ವಿಸ್ತಾರವಾದ ಚರ್ಚೆ ಇದೆ. ಇದು ಕೆಲವೊಮ್ಮೆ ಮೇಲುನೋಟಕ್ಕೆ ಕ್ಷುಲ್ಲಕ ಎಂದು ತೋರುತ್ತದೆ. ಆದರೆ ಇದರ ಹಿಂದೆ ಲೇಖಕರಿಗೆ ಇರುವ ಸಾಮಾಜಿಕ ಕಾಳಜಿ ಪ್ರಶ್ನಾತೀತವಾಗಿದೆ. ಶೌಚಾಲಯದ ಪ್ರಶ್ನೆಯು ನಮ್ಮ ಬದುಕಿನ ದಿನಚರಿಯ ಒಂದು ಭಾಗ ಆಗಿರುವಂತೆ, ನಮ್ಮ ಪರಿಸರದ ಸ್ವಚ್ಛತೆಯ ಅಂಶವಾಗಿರುವಂತೆ, ಇದು ನಮ್ಮ ಸಾಮಾಜಿಕ ಪ್ರಶ್ನೆಯೂ ಆಗಿದೆ. ಕಕ್ಕಸುಗಳು ಕಟ್ಟಿಸಿಕೊಳ್ಳದೆ ಪಟ್ಟಣದಲ್ಲಿ ನಾಗರಿಕರು ಎನಿಸಿಕೊಳ್ಳುವವರು ಮಲ ಹೊರುವ ಒಂದು ವರ್ಗವನ್ನು ಸೃಷ್ಟಿ ಮಾಡಿದ್ದನ್ನು ಕುರಿತು ಲೇಖಕರು ದುಗುಡ ವ್ಯಕ್ತಪಡಿಸುತ್ತಾರೆ. ತಲೆಯ ಮೇಲೆ ಮಲ ಹೊರುವ ಕೆಲಸವನ್ನು ಸಾಮಾನ್ಯವಾಗಿ ತಮ್ಮ ಸಮಾಜದ ದಲಿತ ವರ್ಗದವರು ಮಾಡುತ್ತಿದ್ದರು. ಅದು ನಮ್ಮ ಸಮಾಜದ ಮನಸ್ಥಿತಿಯನ್ನು ಸೂಚಿಸುವ ಸಂಗತಿ. ಇಂತಹ ಅನಿಷ್ಟ ಪದ್ಧತಿಯನ್ನು ತಮ್ಮದೊಂದು ರಾಜಕೀಯ ನಿರ್ಧಾರದ ಮೂಲಕ ನಿಲ್ಲಿಸಿದ ಪೌರಾಡಳಿತ ಮಂತ್ರಿ ಬಿ.ಬಸವಲಿಂಗಪ್ಪ ಅವರನ್ನು ಹೀರೋ ಎಂಬಂತೆ ಲೇಖಕರು ಕಾಣಿಸುತ್ತಾರೆ.

ಈ ಪ್ರಬಂಧದ ಮುಖ್ಯ ಆಶಯವೇನೆಂದರೆ, ಒಂದು ದೇಶದ ರಾಜಕಾರಣ ಜನರ ಅತ್ಯಂತ ಸಾಮಾನ್ಯ ಮತ್ತು ಪ್ರತಿನಿತ್ಯದ ಸಮಸ್ಯೆಗಳಿಗೆ ಮಿಡಿಯಬೇಕು. ಆಗಲ್ಲದೇ ಹೋದರೆ ಹೊಣೆಗೇಡಿ ರಾಜಕಾರಣ ಆಗುತ್ತದೆ ಎಂಬುದು. ಇದೇ 'ಶೌಚ'ದ ಪ್ರಶ್ನೆಯಲ್ಲಿ ಇರುವ ಸಂಗತಿಗಳೆಂದರೆ ೧. ಪರಿಸರವನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವ ವಿಧಾನ. ೨. ಈ ಕ್ರಿಯೆಯು ಕೃಷಿಗೆ ಉಪಯುಕ್ತವಾಗುವ ಹಾಗೆ ಬದಲಾಗುವುದು. ೩. ಗ್ರಾಮೀಣ ಮಹಿಳೆಯರು ಇದಕ್ಕಾಗಿ ಪಡುವ ಪಾಡು ಉಂಟಾಗಬಾರದು. ೪. ಸರ್ಕಾರಗಳು ಇಂಥ ಚಿಕ್ಕ ಆದರೆ ಮಹತ್ವದ ವಿಷಯಗಳ ಬಗ್ಗೆಯೂ ನಿಗಾವಹಿಸುವುದು ಆಗಿದೆ.

**೯. ಕೈಗಾರಿಕೆ ಮತ್ತು ನಗರೀಕರಣಗಳ ಸಮಸ್ಯೆ :** ಬೃಹತ್ ಕೈಗಾರಿಕೆಗಳಿಂದ ಮತ್ತು ನಗರೀಕರಣದಿಂದಾಗಿ ಅಸ್ವಸ್ಥವಾಗುತ್ತಿರುವ ಸಮಾಜದ ಆಗುಹೋಗುಗಳ ಬಗ್ಗೆ ಸಣ್ಣಗುಡ್ಡಯ್ಯನವರಿಗೆ ಇರುವ ಕಾಳಜಿ ಮೇಲಿನ ಸಂಗತಿಯಿಂದ ಸಾಬೀತಾಗುತ್ತದೆ. ದೊಡ್ಡ ದೊಡ್ಡ ಕೈಗಾರಿಕೆಗಳ ಸ್ಥಾಪನೆಯಿಂದಾಗಿ ಹಾಗೂ ಅದರಿಂದ ಉಗುಳುವ ವಿಷ ಅನಿಲದಿಂದ ಕುಲಷಿತವಾಗುತ್ತಿರುವ ಪರಿಸರದ ಹಾನಿಯ ಬಗ್ಗೆ ಲೇಖಕರು ವ್ಯಥೆ ಪಡುತ್ತಾರೆ. ಹೆದ್ದಾರಿಗಳ ಸ್ಥಾಪನೆಗಳಿಂದಾಗಿ ನಗರೀಕರಣವು ಇಂದು ವ್ಯಾಪಕವಾಗಿ ಬೆಳೆಯುತ್ತಿದೆ. ಇದರಿಂದ ಆಗುವ ಅಪಘಾತಗಳು ಭಯವನ್ನುಂಟು ಮಾಡುತ್ತವೆ. ಉದಾಹರಣೆಗೆ 'ಬೆಂಗಳೂರು' ಪ್ರಬಂಧದಲ್ಲಿ ಹೊರ ನೋಟಕ್ಕೆ ವಿಭ್ರಮ ವಿಲಾಸಿಗಳ ಜನರಿಂದಲೇ ತುಂಬಿರುವಂತೆ ಕಂಡುಬರುತ್ತದೆ. ಅವರ ವೈಭವ ವಿಲಾಸಗಳ ಸಲುವಾಗಿ ಕಾರ್ಖಾನೆಗಳಲ್ಲಿ ದುಡಿಯುತ್ತಿರುವವರನ್ನು ನೋಡುತ್ತೇವೆ. ಅಸಂಖ್ಯಾತ ಕಾರ್ಮಿಕ ವರ್ಗಗಳು ಮಂಡಿಪೇಟೆಯಲ್ಲಿ ಹೆಗಲ ಮೇಲೆ ಭಾರ ಹೊತ್ತು ಬದುಕುವ ಚಿತ್ರಣವೂ ಲೇಖಕರಿಗೆ ದುಗುಡವನ್ನುಂಟು ಮಾಡುತ್ತವೆ. ನಗರದ ನೂಕು ನುಗ್ಗಲಿನಲ್ಲಿ ಸಾಗುತ್ತಿರುವ

ಸರಕು ತುಂಬಿರುವ ಗಾಡಿ, ಇವರೆಲ್ಲರನ್ನು ನಗರದ ಕೋಲಾಹಲಮಯ ಬದುಕು ಹೇಗೆ ಹಿಂದ ತಳ್ಳಿದೆ ಎಂಬುದನ್ನು ಅವರು ಚರ್ಚಿಸುತ್ತಾರೆ. ಸಣ್ಣಗುಡ್ಡಯ್ಯನವರನ್ನು ಅತಂಕಕ್ಕೀಡು ಮಾಡಿರುವ ಸಂಗತಿಯೆಂದರೆ, ಜನಜೀವನದ ಮೇಲಾಗಿರುವ ನಾಗರಿಕತೆಯ ದಾಳಿ. ಅದರ ಪರಿಣಾಮವಾಗಿ ಆಗಿರುವ ಆಘಾತಗಳು ಮತ್ತು ದುರಂತಗಳು. ಇವುಗಳ ಜೊತೆಗೆ ಸಣ್ಣಗುಡ್ಡಯ್ಯನವರ ಸಮಾಜವಾದಿ ಆಶಯಗಳು, ಅದಕ್ಕಿಂತ ಹೆಚ್ಚಾಗಿ ಅವರ ಆರೋಗ್ಯಕಾರಿ ಜನಪರ ಕಾಳಜಿಗಳು ಅಭಿವ್ಯಕ್ತಗೊಂಡಿರುವುದು ಇಲ್ಲಿ ಕಂಡುಬರುತ್ತವೆ.

**ಈ. ಗ್ರಾಮೀಣ ಆರ್ಥಿಕತೆಯ ಸಮಸ್ಯೆ** : ಸಣ್ಣಗುಡ್ಡಯ್ಯನವರಿಗೆ ಕಾಡುವ ಸಮಸ್ಯೆಗಳಲ್ಲಿ ಗ್ರಾಮೀಣ ಆರ್ಥಿಕತೆಯ ಸಮಸ್ಯೆಯು ಒಂದು. ಔದ್ಯೋಗಿಕರಣಕ್ಕೆ, ನಾಗರಿಕ ಶಿಕ್ಷಣಕ್ಕೆ ಯೋಜನಾ ಮೀಸಲಾತಿ ಮಾಡಿದಷ್ಟು ಹಳ್ಳಿಗಳ ಕೃಷಿ, ಸಂಪರ್ಕ ಸಾಧನೆ, ಆರೋಗ್ಯ ಸೌಲಭ್ಯಗಳ ಬಗ್ಗೆ, ಮಾಡುತಿಲ್ಲ ಎಂಬುದು ಲೇಖಕರಿಗೆ ಹೆಚ್ಚಾಗಿ ಕಾಡುತ್ತದೆ. ಏಕೆಂದರೆ ಔದ್ಯೋಗಿಕ ಉತ್ಪನ್ನಗಳ ಬೆಲೆ ಒಂದು ರೀತಿಯಾದರೆ, ಹಳ್ಳಿಯ ರೈತರು ಬೆಳೆದ ಉತ್ಪನ್ನಗಳ ಬೆಲೆ ನೀತಿ ಇನ್ನೊಂದು ರೀತಿಯದು ಎಂಬುದು ಅವರಿಗೆ ವಿಚಿತ್ರವೆನಿಸುತ್ತದೆ. ರೈತ ಬೆಳದಾಗ ಮಾರುಕಟ್ಟೆಯಲ್ಲಿ ಬೆಲೆ ಇರುವುದಿಲ್ಲ. ಬೆಳೆ ಎಲ್ಲ ಕೈಬಿಟ್ಟು ರೈತರು ಕೇವಲ ಅಗ್ಗದ ಆಹಾರ ಧಾನ್ಯ ಉತ್ಪಾದಿಸುವ ಜನರೆಂದು ಕೀಳಾಗಿ ಕಾಣುವುದನ್ನು ಬಿಟ್ಟು ಅವರೂ ಉದ್ಯಮಿಗಳಂತೆ ಇವರು ನಾಗರಿಕರಂತೆ ಸಮಾನರು ಎಂದು ತಿಳಿದಾಗ ಮಾತ್ರ ಗ್ರಾಮೀಣ ಆರ್ಥಿಕತೆಯ ಉದ್ಧಾರ ಸಾಧ್ಯವೆಂದು ಲೇಖಕರು ನಂಬುತ್ತಾರೆ.

ಹೀಗೆ ಸಣ್ಣಗುಡ್ಡಯ್ಯನವರ ರಾಜಕೀಯ ಚಿಂತನೆಯು ಜನತೆಯ ನೋವುನಲಿವುಗಳ ಚಿಂತನೆಯಾಗಿ ಮಾರ್ಪಟ್ಟಿದೆ. ನಮ್ಮ ದೇಶದ ರಾಜಕಾರಣಕ್ಕೆ ಒಂದು ಮಾನವೀಯ ಆಯಾಮವನ್ನು ಜೋಡಿಸುವ ದಿಸೆಯಲ್ಲಿ ಅದು ಚಿಂತಿಸುತ್ತದೆ. ನಮ್ಮ ಸಮಾಜದಲ್ಲಿರುವ ಅಸಹಾಯಕ ಮತ್ತು ಮಾತಾಡಲಾರದ ಜನರ ನೋವಿಗೆ ಅಭಿವ್ಯಕ್ತಿಯಾಗಲು ಯತ್ನಿಸುತ್ತದೆ. ಕೇವಲ ರಾಜಕಾರಣಗಳನ್ನು ಟೀಕೆ ಮಾಡುವ ಏಕಮುಖ ನಿಲುವಿನಿಂದ ತಪ್ಪಿಸಿಕೊಂಡು ಒಬ್ಬ ಪ್ರಜ್ಞಾವಂತ ನಾಗರಿಕನೊಬ್ಬನ ಹೊಣೆಗಾರಿಕೆಯನ್ನು ನಿಭಾಯಿಸಲು ಯತ್ನಿಸುತ್ತದೆ. ಲಲಿತ ಪ್ರಬಂಧಗಳ ಮೂಲಕ ನಾಡು ಕಟ್ಟುವ ಚಿಂತನೆಯನ್ನು ಮಾಡಿದ ಅನೇಕ ಲೇಖಕರು ಕನ್ನಡದಲ್ಲಿ ಇದ್ದಾರೆ. ಆದರೆ ಸಣ್ಣಗುಡ್ಡಯ್ಯನವರಷ್ಟು ರಾಜಕೀಯ ಚಿಂತನೆಯನ್ನು ಮಾಡಿದ ಲೇಖಕರು ತುಂಬ ಕಡಿಮೆ ಇದ್ದಾರೆ.

## ೨. ಧಾರ್ಮಿಕ ಚಿಂತನೆಗಳು

ಎಚ್.ಜಿ.ಸಣ್ಣಗುಡ್ಡಯ್ಯನವರ ''ಹದ್ದು ಮತ್ತು ಇತರ ಪ್ರಬಂಧಗಳು'' ಸಂಕಲನದಲ್ಲಿ ಧಾರ್ಮಿಕ ಚಿಂತನೆಗಳನ್ನು ಕಾಣುತ್ತೇವೆ ಈ ಪ್ರಬಂಧ ಸಂಕಲನದಲ್ಲಿ ''ಇನ್ನಷ್ಟು ಹತ್ತಿರ ಬರುವುದು ಹೇಗೆ?'' ಎಂಬ ಪ್ರಬಂಧವನ್ನು ಇಟ್ಟುಕೊಂಡು ಚರ್ಚಿಸಲಾಗಿದೆ. ಇಡೀ ಪ್ರಬಂಧದಲ್ಲಿ ಧಾರ್ಮಿಕ ಚಿಂತನೆಗಳು

ಹಾಸು ಹೊಕ್ಕಾಗಿರುವುದನ್ನು ಮನಗಾಣಬಹುದು. ಇದರಲ್ಲಿ ಲೇಖಕರು ಮನುಷ್ಯನ ಮಾನವೀಯ ಸಂಬಂಧಗಳ ಬಗ್ಗೆ ಪ್ರಶ್ನೆಗಳನ್ನು ಎತ್ತಿಕೊಂಡು ಚರ್ಚಿಸುತ್ತಾರೆ. ಇದೆ ಪ್ರಬಂಧದಲ್ಲಿ 'ದನ'ದ ಮಾಂಸ ತಿನ್ನುವುದನ್ನು ಬಿಡಲು ಮುಸಲ್ಮಾನರು ಏಕೆ ಪ್ರಯತ್ನಿಸಬಾರದು? ಮುಸಲ್ಮಾನರ ಮನಸ್ಸಿಗೆ ಅಸಹ್ಯ ಭಾವನೆ ತರುವ ಹಂದಿಯ ಮಾಂಸವನ್ನು ಹಿಂದೂಗಳು ಅಸಹ್ಯವೆಂದೇ ಏಕೆ ತಿಳಿಯಬಾರದು?''[೨] ಎಂಬ ವಿಷಯವನ್ನು ಇಟ್ಟುಕೊಂಡು ಚರ್ಚಿಸಲಾಗಿದೆ.

ನಮ್ಮ ಭಾರತದಲ್ಲಿ ಅನೇಕ ಬಹುಸಂಸ್ಕೃತಿಗಳು, ಬಹುಭಾಷೆಗಳು ಇರುವುದನ್ನು ಕಾಣುತ್ತೇವೆ. ಈ ಬಹುಸಂಸ್ಕೃತಿಯಲ್ಲಿ ಅಹಾರ ಸಂಸ್ಕೃತಿಯೂ ಒಂದು ಭಾಗವಾಗಿರುವುದನ್ನು ನೋಡುತ್ತೇವೆ. ಸಾಮಾನ್ಯವಾಗಿ ಆಹಾರ ಪದ್ದತಿಗಳು ನಮ್ಮ ವೈಯಕ್ತಿಕ ನಂಬಿಕೆಗೆ ಬಿಟ್ಟ ವಿಷಯಗಳಾಗಿರುತ್ತವೆ. ಇವತ್ತಿನ ಸಂದರ್ಭಗಳಲ್ಲಿ ಮುಸಲ್ಮಾನರಂತೆಯೇ ಹೆಚ್ಚಾಗಿ ದನದ ಮಾಂಸವನ್ನು ತಿನ್ನುವಂಥ 'ಹಿಂದೂ' ಧರ್ಮದ ಮೇಲ್ವರ್ಗದ ಜನರನ್ನು ಕಾಣುತ್ತೇವೆ. ಹಾಗೆಯೇ ದಲಿತರು ತಿನ್ನುವುದನ್ನು ನೋಡುತ್ತೇವೆ. ಆದರೆ ಇವರೆಲ್ಲ ಹಿಂದೂಗಳಲ್ಲವೇ? ಇಂಥ ಅಸಹ್ಯ ಭಾವನೆ ಹಿಂದೂಗಳಲ್ಲಿ ಮೂಡಲು ಹೇಗೆ ಸಾಧ್ಯ ಎಂಬ ವಿಚಾರ ಬರುತ್ತದೆ.

ಭಾರತದಂಥ ರಾಷ್ಟ್ರಗಳಲ್ಲಿ ದುರ್ಬಲರಿಗೆ ಹೊಡೆತ ಬೀಳುವುದು ಜಾಸ್ತಿಯಾಗುತ್ತದೆ. ಆಹಾರ ಒಳಗೊಂಡಂತೆ ಯಾವುದೇ ಒಂದು ಪದ್ಧತಿಯನ್ನು ತ್ಯಜಿಸುವುದು, ಸ್ವೀಕರಿಸುವುದು ಅವರವರ ಮನೋಧರ್ಮಕ್ಕೆ ಹಾಗೂ ನಂಬಿಕೆಗೆ ಬಿಟ್ಟ ವಿಷಯವಾಗಿರುತ್ತದೆ. ಭಾರತವು ಬಹು ಸಂಸ್ಕೃತಿಗಳ, ಬಹುಭಾಷೆಗಳ ರಾಷ್ಟ್ರವಾಗಿರುವುದರಿಂದ ಇಲ್ಲಿ ಕೊಡುಕೊಳು ವ್ಯವಹಾರಗಳು ನಡೆಯುವುದು ಸರ್ವೆಸಾಮಾನ್ಯವಾದ ವಿಷಯವಾಗಿದೆ. ಭಾರತವನ್ನು ಬಿಟ್ಟು ಬೇರೆ ದೇಶಗಳಲ್ಲಿ ಆಹಾರ ಸಂಸ್ಕೃತಿಯಲ್ಲಿನ ಭಿನ್ನಾಭಿಪ್ರಾಯಗಳು ಇಷ್ಟು ತೀವ್ರವಾಗಿ ಕಾಣುವುದಿಲ್ಲ. ಏಕೆಂದರೆ ಅವೆಲ್ಲ ಮುಂದುವರೆದ ರಾಷ್ಟ್ರಗಳಾಗಿದ್ದು, ಅಲ್ಲಿ ಮೂಢನಂಬಿಕೆ-ಕಂದಾಚಾರಗಳಿಗೆ ಆಸ್ಪದ ಕಡಿಮೆ ಎಂದು ಹೇಳಬಹುದು. ಭಾರತದಂತಹ ಜಾತಿ ಶ್ರೇಣೀಕರಣ ಇರುವ ಸಮಾಜದಲ್ಲಿ ಕೋಮುವಾದ, ಮೂಲಭೂತವಾದ ಇರುವ ಸಮಾಜದಲ್ಲಿ ಇಂಥ ಸರಳವಾದ ಸಮಸ್ಯೆಗಳು ಜಟಿಲವಾಗುತ್ತಾ ಹೋಗುತ್ತವೆ. ಆದರೆ ಬೇರೆ ದೇಶಗಳಲ್ಲಿ ಸಂಸ್ಕೃತಿ ಏಕಮುಖವಾಗಿರುವುದರಿಂದ ಇಂಥ ಆಹಾರ ಸಂಸ್ಕೃತಿಯಲ್ಲಿನ ತೊಡಕುಗಳು ಈ ಪ್ರಮಾಣದಲ್ಲಿ ಬರುವುದಿಲ್ಲ. ಸಣ್ಣಗುಡ್ಡಯ್ಯನವರು ಈ ಬಗ್ಗೆ ಚಿಂತಿಸಿ ದಾರ್ಶನಿಕವಾದ ಈ ಮಾತುಗಳನ್ನು ಬರೆಯುತ್ತಾರೆ:

''ಮಾನವೀಯ ಸಂಬಂಧಗಳು ಎಂಬುದು ಒಂದು ಸಾಮಾನ್ಯ ಕಲ್ಪನೆ. ನೆರೆಯವರನ್ನೆಲ್ಲ ಅವರು ತಮ್ಮ ಸ್ವಭಾವ, ಮಾಡುವ ಕೆಲಸ ಮತ್ತು ಉದ್ದೇಶಗಳಿಂದ ಈಗಾಗಲೇ ನಮ್ಮ ಶತ್ರುಗಳ ಪಟ್ಟಿಯಲ್ಲಿ ಸೇರಿ ಹೋಗಿಲ್ಲವಾದರೆ - ಸ್ನೇಹಿತರೆಂದು ಭಾವಿಸುವುದು ಕಷ್ಟವಲ್ಲ. ಭಾತೃತ್ವ ಎಂಬುದು ಕೂಡ ಬಹಳ

ದೊಡ್ಡ, ಅನುಷ್ಠಾನಕ್ಕೆ ತರುವುದು ಕಠಿಣವಾದ ಆದರ್ಶ. ವಾಸ್ತವವಾಗಿ ಮನುಷ್ಯ ಮನುಷ್ಯರ ನಡುವೆ ಏರ್ಪಡಬಹುದಾದ ಅತ್ಯಂತ ನಿಕಟ ಸಂಬಂಧ ಯಾವುದು? ಬಹುಶಃ ದೈಹಿಕ ಸಂಬಂಧ ಅಥವಾ ವಿವಾಹ ಸಂಬಂಧ. ಒಂದು ಜನಾಂಗದವರು ಬೇರೆಯೇ ಧರ್ಮವನ್ನು ಆಚರಿಸುವ ಇನ್ನೊಂದು ಜನಾಂಗದವರೊಡನೆ ವಿವಾಹ ಸಂಬಂಧವನ್ನು ಬೆಳೆಸುವುದು ಸಾಮಾನ್ಯವಾಗಿ ಸುಲಭವಲ್ಲ. ಬೆಳೆಸಿದವರಿದ್ದಾರೆ, ಬೆಳೆಸಲು ಬಯಸಿ ಮಾತಾ ಪಿತೃಗಳ, ಪೋಷಕರ ಅಥವಾ ಬಂಧು ಬಳಗದವರ ವಿರೋಧದಿಂದಾಗಿ ಈ ಪ್ರಯತ್ನವನ್ನು ಕೈಬಿಟ್ಟವರಿದ್ದಾರೆ. ಆರ್ಥಿಕವಾಗಿ ಅತ್ಯಂತ ಧನಿಕರಾದವರಿಗೆ ಅಥವಾ ಏನೂ ಇಲ್ಲದ ನಿರ್ಗತಿಕರಿಗೆ ಇದು ಅಷ್ಟು ದೊಡ್ಡ ಸಮಸ್ಯೆಯಲ್ಲ ಇಂಥ ಪ್ರಯತ್ನಗಳನ್ನು ಅವರು ಮಾಡಿ ಸುಲಭವಾಗಿ ಜಯಶಾಲಿಗಳಾಗುತ್ತಾರೆ. ಅಥವಾ ಸುಲಭವಾಗಿ ಸೋತು ಕೆಟ್ಟ ಕನಸನ್ನು ಮರೆಯುವಂತೆ ಅದನ್ನು ಮರೆತುಬಿಡುತ್ತಾರೆ. ಸಮಾಜದ ಮುಖ್ಯ ಭಾಗವಾದ ಬಹುಸಂಖ್ಯಾತ ಮಧ್ಯಮ ವರ್ಗದವರಿಗೆ ಇದು ಅಷ್ಟು ಸುಲಭವಲ್ಲ. ಕಾರಣವೇನು? ಈ ಜನಾಂಗಗಳು ನಂಬುವ, ಆಚರಿಸುವ ಧರ್ಮವೇ ಇದನ್ನು ಅಸಾಧ್ಯವಾಗಿಸಿರುವ ದೊಡ್ಡ ವಿಭಜಕ ಗೋಡೆ''[೩]

ಈ ಪ್ರಬಂಧದಲ್ಲಿ ಸಣ್ಣಗುಡ್ಡಯ್ಯನವರ ಆಶಯ ಚೆನ್ನಾಗಿದೆ. ಆದರೆ ನಾನು ಪ್ರಾಯೋಗಿಕವಾಗಿ ಸಮಸ್ಯೆಗಳನ್ನುಂಟು ಮಾಡುವಂಥದ್ದಾಗಿದೆ. ಒಂದು ರೀತಿಯಲ್ಲಿ ಲೇಖಕರು ಸಂಸ್ಕೃತೀಕರಣದ ಚೌಕಟ್ಟನಲ್ಲಿ ಸಮಸ್ಯೆಯನ್ನು ಗ್ರಹಿಸಿರುವುದನ್ನು ಈ ಪ್ರಬಂಧದಲ್ಲಿ ಕಾಣುತ್ತೇವೆ. ಭಾರತದಂಥ ಬಹುಸಂಸ್ಕೃತಿಗಳಲ್ಲಿ ಹುಟ್ಟುವ ಸಮಸ್ಯೆಗಳು ಜಟಿಲವಾಗಿರುತ್ತದೆ. ಆದ್ದರಿಂದ ಸರ್ವ ಸಮ್ಮತವಾದ ಪರಿಹಾರ ಕೊಡುವುದು ಕಷ್ಟವೆಂದೇ ಹೇಳಬಹುದು. ಹಾಗೆಂದು ಜಟಿಲವಾದ ಸಮಸ್ಯೆಗಳಿಗೆ ಸರಳೀಕೃತ ಪರಿಹಾರವನ್ನು ಕೊಡಬಾರದು.

ಇದೇ ಪ್ರಬಂಧದಲ್ಲಿ ಸಣ್ಣಗುಡ್ಡಯ್ಯನವರು ಬೇರೆ ಬೇರೆ ಸಮಾನಗಳಿಗೆ ಸೇರಿದ ಜನರ ನಡುವಿನ ಮಾನವೀಯ ಸಂಬಂಧಗಳ ಬಗ್ಗೆ ಚರ್ಚಿಸುತ್ತಾ, ತಾವು ಕಂಡ ಒಬ್ಬ ಮುಸ್ಲಿಂ ಹುಡುಗಿಯ ಪ್ರಸ್ತಾಪ ಮಾಡುತ್ತಾರೆ. "ಆ ಬಡ ಗೃಹಸ್ಥನ ಮಗಳ ಆಕೃತಿ ಮತ್ತು ಅವಳ ಮುಖದಲ್ಲಿ ನಾನು ಕಂಡಿದ್ದ "ಮೃದು" ಎನ್ನಬಹುದಾದ ಸ್ವಭಾವ. ಆ ಮೇಲೆ ನಮ್ಮ ಮನೆಗೆ ಬಂದ ನನ್ನ ಅತ್ತಿಗೆಯ ರೂಪ ಮತ್ತು ಗುಣಗಳಿಗೆ ಹೋಲಿಸಿಕೊಂಡು ಆ ಹುಡುಗಿಯಂಥವಳು ನಮ್ಮ ಅತ್ತಿಗೆಯಾಗಿ ಏಕೆ ಬರಲಿಲ್ಲ ಎಂದು ಹಲವು ಸಲ ಎಂದುಕೊಂಡಿದ್ದೆ''[೪] ಎಂದು ಅವರು ಹೇಳುತ್ತಾರೆ. ಧರ್ಮಗಳಾಚೆ ಇರುವ ಮನುಷ್ಯ ಸಂಬಂಧಗಳಲ್ಲಿ ಮಾನವೀಯ ಮೌಲ್ಯಗಳು ಅಡಕವಾಗಿರುತ್ತವೆ. ಇಲ್ಲಿ ಮುಸ್ಲಿಂ, ಹಿಂದೂ ಎನ್ನುವ ಭಾವನೆಯೇ ಬರುವುದಿಲ್ಲ. ಹಾಗೆಯೇ ಇಲ್ಲಿ ನೋಡುವ ದೃಷ್ಟಿ ಲೈಂಗಿಕ ಭಾವನೆಯದಲ್ಲ. ಜಾತಿ ಬೇರೆಯಾದರೂ ಆತ್ಮೀಯತೆಯ ಕೊಂಡಿ ಬೆಸೆದಿರುವುದನ್ನು ಇಲ್ಲಿ ನೋಡಬಹುದು. ಇಂಥ ಕಡೇ ಜಾತಿಯೇ ಕಂಡುಬರುವುದಿಲ್ಲ. ನಿರ್ಮಲವಾದ ಸ್ನೇಹ ಮಾತ್ರ ಕಂಡುಬರುತ್ತದೆ. ಜಾತಿ ಮುಖ್ಯವಲ್ಲ ಮಾನವೀಯ ಸಂಬಂಧಗಳು ಮುಖ್ಯ ಎಂಬ ಅಂಶ ಈ ಪ್ರಬಂಧದಿಂದ ತಿಳಿದುಬರುತ್ತದೆ. ಜಾತಿ, ಮತ,

ಪಂಥ, ಕೋಮುಗಳು ಇಂದು ಇಡೀ ಭಾರತ ದೇಶವನ್ನೇ ಜರ್ಝರಿತಗೊಳಿಸಿವೆ. ಈ ಹಿನ್ನೆಲೆಯಲ್ಲಿ ಮಾನವೀಯ ಸಂಬಂಧಗಳು ಮತ್ತಷ್ಟು ಗಟ್ಟಿಗೊಳಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಈ ಪ್ರಬಂಧ ಮಹತ್ವ ಹೊಂದಿದೆ.

ಸಣ್ಣಗುಡ್ಡಯ್ಯನವರು ಈ ಪ್ರಬಂಧವನ್ನು ೧೯೯೫-೯೬ರಲ್ಲಿ ಬರೆದರು. ಈ ಸಂದರ್ಭದಲ್ಲಿ ಬಾಬರಿ ಮಸೀದಿಯ ಧ್ವಂಸದ ಘಟನೆ ನಡೆದಿತ್ತು. ಈ ಘಟನೆಯಿಂದ ಭಾರತದಲ್ಲಿ ನಡೆದ ಕೋಮು ಹಿಂಸೆ ಮಾನವೀಯ ಸಂಬಂಧಗಳ ಪತನವನ್ನು ನಾವು ಮನಗಂಡಿದ್ದೇವೆ. "ಇನ್ನಷ್ಟು ಹತ್ತಿರ ಬರುವುದು ಹೇಗೆ?" ಪ್ರಬಂಧದಲ್ಲಿ ಎಲ್ಲ ಧರ್ಮಗಳು ಒಂದೇ ಎಂದು ಹೇಳುವ ಯತ್ನ ಮಾಡುತ್ತಾರೆ. ಮನುಷ್ಯ ಮನುಷ್ಯರ ನಡುವೆ ಏರ್ಪಡಬೇಕಾದುದು ಮಾನವೀಯ ಸಂಬಂಧಗಳೇ ಹೊರತು ಜಾತಿಯಲ್ಲ? ಹಾಗೆಯೇ ಹಿಂದೂ, ಮುಸಲ್ಮಾನ, ಕ್ರೈಸ್ತ ಇವರ್‍ಯಾರು ನಮ್ಮ ಶತ್ರುಗಳಲ್ಲ. ಇವರು ಒಮ್ಮೆ ಪರಮ ವೈರಿಗಳಾದರೆ ಮತ್ತೊಮ್ಮೆ ಪರಮ ಮಿತ್ರರಾಗುತ್ತಾರೆ. ಹಾಗಾದರೆ ಈ ರಾಷ್ಟ್ರದ ನಿಜವಾದ ವೈರಿಯಾರು? ಜಾತೀಯತೆಯೇ ಭಾರತದ ಪ್ರಪ್ರಥಮ ವೈರಿ ಎಂದು ಹೇಳಬೇಕಾಗುತ್ತದೆ.

ಹಿಂದೂ ಮದುವೆಯಲ್ಲಿ ಬುರ್ಖಾ ಧರಿಸಿದ ಹೆಣ್ಣು ಮಗಳೊಬ್ಬಳು ಮದುವೆ ಸಂತೋಷವನ್ನು ಪಡುವ ಸಂದರ್ಭವೊಂದು ಇಲ್ಲಿ ಬರುತ್ತದೆ. ಇಲ್ಲಿ ಎರಡು ಸಂಸ್ಕೃತಿಗಳ ನಡುವೆ ಸಮರಸದ ಬಾಂಧವ್ಯವು ಸಮ್ಮಿಲನವಾಗುವುದನ್ನು ಲೇಖಕರು ಗುರುತಿಸುತ್ತಾರೆ. ಒಂದು ಹಿಂದೂ ಸಂಸ್ಕೃತಿ, ಇನ್ನೊಂದು ಮುಸ್ಲಿಂ ಸಂಸ್ಕತಿ. ಸಂಸ್ಕೃತಿಗಳು ಬೇರೆ ಬೇರೆಯಾದರೂ ಮಾನವ ಗುಣಗಳು ಆದರ್ಶವಾಗುವುದನ್ನು ಈ ಪ್ರಬಂಧದಲ್ಲಿ ಕಾಣಬಹುದು. ಇಂಥ ಸಂದರ್ಭಗಳಲ್ಲಿ ಸ್ವೀಕರಣೆ ಮುಖ್ಯವೇ ಹೊರತು ನಿರಾಕರಣೆ ಮುಖ್ಯವಲ್ಲ. ನಾವು ಆಚರಿಸುವ ಸಂಪ್ರದಾಯಗಳನ್ನು ಮುರಿದು ಮಾನವ ಸಂಬಂಧಗಳಿಗೆ ದಿಟ್ಟ ಹೆಜ್ಜೆ ಹಾಕುವುದು ಮಹತ್ವದ್ದಾಗಿರುತ್ತದೆ. ಇಲ್ಲಿ ಆಚಾರ-ವಿಚಾರಗಳು ಗೋಚರಿಸುವುದಿಲ್ಲ. ಮುಸ್ಲಿಮರಾಗಿ ಹಿಂದೂಗಳ ಜೊತೆ ನಾವೆಲ್ಲ ಒಂದೇ ಎಂಬ ಸಂಸ್ಕೃತಿಯನ್ನು ತೋರಿಸುವ ಗುಣವನ್ನು ಈ ಪ್ರಬಂಧದಲ್ಲಿ ಕಾಣಬಹುದು. ಭಾಷೆ ಬೇರೆ, ಜಾತಿ ಬೇರೆ, ಧರ್ಮಬೇರೆಯಾದರೂ ಮನುಷ್ಯನ ಮಾನವೀಯ ಸಂಬಂಧಗಳು ಒಂದೇ ಎಂಬ ಫಲಿತ ಈ ಪ್ರಬಂಧದಲ್ಲಿ ಕಂಡುಬರುತ್ತದೆ.

## ೩. ಜೀವನ ಚಿಂತನೆಗಳು

ಸಣ್ಣಗುಡ್ಡಯ್ಯನವರು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಚಿಂತನೆಯನ್ನು ಮಾಡುತ್ತಾರೆ. ಆದರೂ ಅವರ ಚಿಂತನೆಯಲ್ಲಿ ಬಹಳ ಮುಖ್ಯವಾದ ಭಾಗ ಜೀವನ ಚಿಂತನೆ. ಇದನ್ನು ಜೀವನ ಜಿಜ್ಞಾಸೆ ಎಂದು ಕರೆಯಬಹುದು. ಇದರಲ್ಲಿ ಲೇಖಕರು ಮನುಷ್ಯನ ಬದುಕಿನ ಬಗ್ಗೆ

ಮೂಲಭೂತ ಪ್ರಶ್ನೆಗಳನ್ನು ಎತ್ತಿಕೊಂಡು ಚರ್ಚಿಸುತ್ತಾರೆ. ಉದಾ : ಮನುಷ್ಯನ ಒಂಟಿತನ(ಏಕಾಂತ) ಸಾವು(ಕಾಲ) ಕಾಲ, ಮುಪ್ಪು, ಸುಖ ಅತ್ಯುತ್ತಮವಾದ ಜೀವನವನ್ನು ನಡೆಸುವ ಆದರ್ಶ, ಧೀಮಂತಿಕೆ ಇತ್ಯಾದಿ.

'ಏಕಾಂತ' ಪ್ರಬಂಧದಲ್ಲಿ ಲೇಖಕರು ನಿರಂತರ ದುಡಿಮೆ ಮತ್ತು ಗಜಿಬಿಜಿಯ ಜೀವನದಲ್ಲಿ ಮನುಷ್ಯರಿಗೆ ಮುಖ್ಯವಾಗಿ ಬೇಕಾಗುವ ಏಕಾಂತದ ಬಗ್ಗೆ ಚಿಂತಿಸುತ್ತಾರೆ. ಈ ಪ್ರಬಂಧದ ನಾಯಕನು (ನಿರೂಪಕನು) ಒಂದು ದಿನ ತನ್ನದೇ ಊರಿನಲ್ಲಿ ಒಂದು ಹೋಟೆಲ್ ಕೋಣೆಯನ್ನು, ತೆಗೆದುಕೊಂಡು ಇಡೀ ದಿನ ಏಕಾಂತ ಅನುಭವಿಸುವುದರ ಚಿತ್ರಣ ಇಲ್ಲಿ ಬರುತ್ತದೆ. ಮತ್ತೊಮ್ಮೆ ತನ್ನೂರಿನ ಪ್ರವಾಸಿ ಮಂದಿರದಲ್ಲಿ ಇದೇ ತರಹದ ಏಕಾಂತವನ್ನು ಆತ ಅನುಭವಿಸುವ ವಿವರಗಳಿವೆ. ಇಲ್ಲಿ ಏಕಾಂತವೆಂದರೆ ಯಾವ ಮನುಷ್ಯ ಸಹವಾಸವೂ ಇಲ್ಲದೆ, ತನಗೆ ಪ್ರಿಯವಾದ ಓದು, ಧೂಮಪಾನ, ಚಿಂತನೆ ಮಾಡಿಕೊಂಡು ಮನಸ್ಸಿಗೆ ಬಂದಂತೆ ಇರುವುದು. ಆದರೆ ನಿರೂಪಕ ಏಕಾಂತಕ್ಕೆ ಎಲ್ಲಾ ಕಡೆ ಅಡೆತಡೆ ಒದಗುತ್ತದೆ. ಇದರರ್ಥ ಈ ನಿಕೂಪಕನು ಜನ ದ್ವೇಷಿಯೆಂದಲ್ಲ. ಅವನಿಗೆ ಜನರ ಬದುಕಿನ ಬಗ್ಗೆ ಕಾಳಜಿ ಇದೆ. ಅವನಿಗೆ ಗೆಳೆಯರ ದೊಡ್ಡ ಬಳಗವಿದೆ. ಅವನಿಗೆ ಸಾಮಾಜಿಕ ಚಟುವಟಿಕೆಗಳಲ್ಲಿ ಆಸಕ್ತಿ ಇದೆ. ಈ ಸಮಾಜ ಸುಧಾರಣೆಯಾಗಬೇಕೆಂಬ ಆಶಯವಿದೆ. ಆದರೂ ಈ ಎಲ್ಲ ಕೆಲಸಗಳ ನಡುವೆ ಅವನದೇ ಆದ ಏಕಾಂತದ ಬದುಕು ಅವನಿಗೆ ಬೇಕೆನಿಸುತ್ತದೆ. ಮನುಷ್ಯ ಮೂಲತಃ ಒಂಟಿ ಎಂದು ಆತ ಭಾವಿಸಿರುವವನು. ತಾನು ಇಳಿದುಕೊಂಡಿದ್ದ ಕೋಣೆಯಲ್ಲಿನ ಗೃಹದಲ್ಲಿ ಒಂಟಿಯಾಗಿರುವ ಅವನ ಕಣ್ಣಿಗೆ ಏಕಾಂಗಿ ಜೀವನ ನಡೆಸುತ್ತಿರುವ ಜೀವಿಯಾಗಿ ಕಾಣುತ್ತದೆ. ಅಪಘಾತಕ್ಕೆ ಒಳಗಾದ ಲಾರಿಯಲ್ಲಿ ಸಿಕ್ಕಿ ಸತ್ತ ಕ್ಲೀನರ್‌ನ ದೇಹ ನೋಡಿದಾಗ ಮನುಷ್ಯರು ಒಂಟಿಯಾಗಿ ಜಗತ್ತನ್ನು ತೊರೆದು ಹೋಗುವ ದುರಂತ ಅವನಿಗೆ ಗೋಚರಿಸುತ್ತದೆ. ಅವನು ಕೊನೆಗೆ ಹೀಗೆ ಚಿಂತಿಸುತ್ತಾನೆ:

"ತುಂಬಿದ ಮನೆಯಲ್ಲಿ ದೊಡ್ಡದೊಂದು ಸಮಾರಂಭದಲ್ಲಿ, ಜನ ತುಂಬಿದ ವಾಹನಗಳಲ್ಲಿ ಎಲ್ಲಿ ಕುಳಿತಿದ್ದರೂ ಇಂತಹ ಆಲೋಚನೆಯಲ್ಲಿ ಮಗ್ನರಾಗಿ ಮನುಷ್ಯ ಒಬ್ಬೊಂಟಿಯಾಗಿ ನಡೆಯುವುದನ್ನು ಕಾಣಬಹುದು. ನಗರದ ಉಪ್ಪರಿಗೆಯೊಂದನ್ನೇರಿ ಮೇಲೆ ನಿಂತು ನೋಡಿದರೆ ಬೀದಿಗಳಲ್ಲಿ ಕಿಕ್ಕಿರಿದು ಹರಿಯುತ್ತಿರುವ ಜನಪ್ರವಾಹದಲ್ಲಿ ಒಬ್ಬೊಬ್ಬನೂ ಒಂಟಿಯಾಗಿ ಚಲಿಸುತ್ತಿರುವುದನ್ನು ನೋಡಬಹುದು. ಪ್ರತಿಯೊಬ್ಬನಿಗೂ ತನ್ನದೇ ಎಚ್ಚರ, ತನ್ನದೇ ಕಾತರ; ಭಯ, ಮಜುಗರ, ಅವಸರ, ಠೀವಿ, ಪ್ರತಿಷ್ಠೆ ಇದರಲ್ಲಿ ಯಾವೊಂದು ಅಂಶ ತೆಗೆದುಕೊಂಡು ನೋಡಿದರೂ ಅದು ಮನುಷ್ಯನ ಒಂಟಿತನವಿಟ್ಟ ಮೊಟ್ಟೆ".[7]

"ಹತ್ತು ಸಾವಿರ ಜನ ಕೊಡುವಂಥ ಸಭಾಂಗಣದ ಎದುರು ಒಬ್ಬನೇ ನಿಂತು ವಿಸ್ಮಯದಿಂದ ವೇದಿಕೆಯನ್ನು ಮಿಕಿ ಮಿಕಿ ನೋಡುತ್ತಿರುವ ಆಗಂತುಕನಂತೆ, ಮೇರೆಗಳೇ ಕಾಣದ ವಿಪುಲ ಸಾಗರದ

ನಡುವೆ ತೇಲುತ್ತಿರುವ ಕಿರು ನಾವೆಯಂತೆ, ಜಗದಗಲ ಹಬ್ಬಿಕೊಂಡಿರುವ ವೃತ್ತದ ನಡುವೆ ಗುರುತಿಸಿರುವ ಕಪ್ಪು ಮಸಿಯ ಕೇಂದ್ರ ಬಿಂದುವಿನಂತೆ ಈ ಜೀವ ಒಂಟಿಯಾಗಿದೆ. ಒಂಟಿತನದ ವೇದನೆಯನ್ನು ತಡೆಯಲಾರದೆ, ಬಿಸಿಲಿಗೆ ಆರುವ ಜಲಬಿಂದುವಿನಂತೆ ಕ್ಷೀಣಿಸುತ್ತಾ, ಕ್ರಮೇಣ ನಶಿಸಿ ಹೋದರೂ ಅದು ತನ್ನ ಒಂಟಿತನವನ್ನಂತೂ ಬಿಡಲಾರದು. ಕಣ್ಣುಮುಚ್ಚಿಕೊಂಡು ನಮ್ಮ ದೃಷ್ಟಿಧಾರೆಯನ್ನು ಉಪಸಂಹರಿಸಿ "ನನಗೂ ಹೊರಗಿನ ಯಾವುದಕ್ಕೂ ಸಂಬಂಧವಿಲ್ಲ; ನಾನು, ನನ್ನ ಜೀವನ ಪ್ರತ್ಯೇಕ; ಒಂಟಿ"[೬] ಎಂದುಕೊಂಡು ಪ್ರತಿಯೊಬ್ಬರೂ ಅವರವರ ಪಾಡಿಗೆ ಕುಳಿತುಬಿಟ್ಟರಾಯಿತು. ಜನ, ಜಗತ್ತು, ಸೃಷ್ಟಿಯ ಅದ್ಭುತ ಸೌಂದರ್ಯ, ಸುತ್ತಲಿನ ಜೀವರಾಶಿ ಎಲ್ಲವೂ ಕ್ಷಣಮಾತ್ರದಲ್ಲಿ ಇಲ್ಲವಾಗಿ ಬಿಡುತ್ತದೆ. ಕಣ್ಣು ಬಿಟ್ಟು ಹೊರಗೆ ನೋಡಿದಾಗಷ್ಟೇ ಅವುಗಳಿಗೆ ಜಗತ್ತು ಎಂದರೆ ಹೇಗಿರುತ್ತದೆಯೊ ಕಾಣೆ. ನಮ್ಮ ಹೃದಯದ ಬಾಗಿಲನ್ನು ತೆರೆದು ಜಾಗೃತವಾಗಿಟ್ಟು, ಹೊರಗಿನ ನೋಟ, ಶಬ್ದ, ಚಲನಗಳನ್ನು ಗ್ರಹಿಸಿದಾಗಷ್ಟೇ ಸೃಷ್ಟಿಗೆ ಸೌಂದರ್ಯ ಪ್ರಾಪ್ತವಾಗುತ್ತದೆ; ಬಂಧು, ಮಿತ್ರ, ಹಿತ-ಅಹಿತ ಮುಂತಾದ ಸಂಬಂಧ ಉಂಟಾಗುತ್ತದೆ. ಅಂದ ಮೇಲೆ ಏನಾಯಿತು? ಈ ಜೀವ ಒಂಟಿತನವನ್ನು ನಿರೋಧಿಸಿ ಹೊರಗಿನ ವಸ್ತುಗಳೊಡನೆ ಸಂಬಂಧ, ತಾದಾತ್ಮ್ಯಗಳನ್ನು ಕಾಣಲು ಎಲ್ಲಿಯವರೆಗೆ ಪ್ರಯತ್ನಿಸುತ್ತದೆಯೋ ಅಲ್ಲಿಯವರೆಗೆ ಸೃಷ್ಟಿ, ವಿಶ್ವಗಳ ಅಸ್ತಿತ್ವ ಯಾವಾಗ ಅದು ಸೋತು ಒಂಟಿತನವೆಂಬ ವಾಸ್ತವತೆಯ ಕೈಬಿಗಿಯಾಗಿ ಬಿಡುತ್ತದೋ ಆಗ ಸುತ್ತಲೂ ಉಳಿಯುವುದು ಬರಿಶೂನ್ಯ. ಅದೇ ಸಾವು; ಜೀವಿಯ ಒಂಟಿತನ ನೆಟ್ಟ ವಿಜಯಪತಾಕೆ."[೧೮]

ಪ್ರಬಂಧದ ಕೊನೆಯ ಭಾಗದಲ್ಲಿ ಪ್ರಬಂಧವು ಒಂದು ದಾರ್ಶನಿಕ ಎತ್ತರಕ್ಕೆ ಏರುತ್ತದೆ. ವಾಸ್ತವವಾಗಿ ಸಣ್ಣಗುಡ್ಡಯ್ಯನವರ ಲಲಿತ ಪ್ರಬಂಧಗಳಲ್ಲಿ ಲಾಲಿತ್ಯ ಅಂಶ ಇದ್ದೇ ಇದೆ. ಆದರೆ ಇಂತಹ ದಾರ್ಶನಿಕ ಚಿಂತನೆಯುಳ್ಳ ಪ್ರಬಂಧಗಳಲ್ಲಿ ಈ ಲಾಲಿತ್ಯದ ಅಂಶ ಕಡಿಮೆಗೊಂಡು ಗಂಭೀರ ಚಿಂತನೆಯ ಆಯಾಮ ಹೆಚ್ಚುಗೊಳ್ಳುತ್ತದೆ. ಇದು ಸಣ್ಣಗುಡ್ಡಯ್ಯನವರ ಪ್ರಬಂಧಗಳ ವಿಶೇಷತೆಯಾಗಿದೆ. ಅಂತ ಗಂಭೀರ ಚಿಂತನೆಯನ್ನು ಒಳಗೊಂಡಿರುವ ಪ್ರಬಂಧಗಳಲ್ಲಿ 'ಏಕಾಂತ' ಪ್ರಬಂಧವು ಮುಖ್ಯವಾಗಿದೆ. ಈ ಪ್ರಬಂಧವು ಕೊನೆಗೊಳ್ಳುವುದು ಹೀಗೆ: "ಪ್ರತಿಯೊಬ್ಬನ ಜೀವಿತದ ಕಥೆಯೂ ಮರ್ತ್ಯಜೀವಿಯ ಒಂಟಿತನದ ಕಥೆ; ಜಗತ್ತಿನ ಇತಿಹಾಸ ಆ ಒಂಟಿತನವನ್ನು ಮರಿಯಲಾರದ ಮನುಷ್ಯನ ಅಸಹಾಯಕತೆಯ ಇತಿಹಾಸ. ಇಷ್ಟಾದರೂ ನಮ್ಮ ನತದೃಷ್ಟ ಪೂರ್ವಾಚಾರ್ಯರುಗಳು ಕೂಡ ಭಗವಂತನ ಸೃಷ್ಟಿಯ ಶಿಬಿರದ ಮೇಲೆ ನಿಂತು ಆಕಾಶಕ್ಕೆ ಕೈಚಾಚಿ ಬೇಡಿಕೊಂಡ ವರವಾದರೂ ಏನು? 'ದೇವರೇ, ಈ ಏಕಾಕಿತನದ ಉಬ್ಬಸವನ್ನು ಸೀಳಿ ಜಗತ್ತಿನ ಜೀವನದೊಂದಿಗೆ ನಿರಂತರ ಬಾಂಧವ್ಯವನ್ನು ಹೊಂದುವ ಶಕ್ತಿಯನ್ನು ಕೊಡು' ಎಂದಲ್ಲ. 'ಈ ಎಲ್ಲ ಬಂಧನಗಳನ್ನು ಕತ್ತರಿಸಿ ನನಗೆ ಮುಕ್ತಿಯನ್ನು ದಯಪಾಲಿಸು' ಎಂದು 'ಮುಕ್ತಿ' ಎಂಬುದು ಮನುಷ್ಯನ ಏಕಾಕಿತನಕ್ಕಿಟ್ಟ ಇನ್ನೊಂದು ಹೆಸರು ತಾನೆ?"[೭]

'ಕಾಲ' ಪ್ರಬಂಧವೂ ಸಣ್ಣಗುಡ್ಡಯ್ಯನವರ ಮತ್ತೊಂದು ಪ್ರಮುಖ ಚಿಂತನಶೀಲ ಪ್ರಬಂಧವಾಗಿದೆ. ಬೆಂಗಳೂರು ನಗರವೂ ಕಾಲಬದಲಾದಂತೆ ಹೇಗೆ ಬೆಳೆಯುತ್ತಾ ವಾಹನ ದಟ್ಟಣೆಯ ಮತ್ತು ಗಜಿಬಿಜಿಯ ನಗರವಾಗಿ ಬದಲಾಗುತ್ತದೆ ಎಂಬ ವಿವರಣೆಯ ಮೂಲಕ ಇದು ಆರಂಭವಾಗುತ್ತದೆ. ಪಾರ್ಕಿನಲ್ಲಿ ಗಾಢವಾಗಿ ನಿದ್ದೆ ಹೋಗಿರುವ ಒಬ್ಬ ಮನುಷ್ಯನು "ಗದ್ದಲದ ನೆರೆಯಲ್ಲೇ ಒಂದಷ್ಟು ಏಕಾಂತವನ್ನು ಸಂಪಾದಿಸಿ, ಅಲ್ಲಿ ತನ್ನ ಮೆದುಳಿಗೆ ತುಸು ಕಾಲದ ವಿಶ್ರಾಂತಿಯನ್ನು ಪಡೆಯಲಿಚ್ಛಿಸಿದವನು. ಆದರೂ ಆ ಹೊತ್ತಿನಲ್ಲಿ, ಆ ಜಾಗದಲ್ಲಿ ನಿದ್ದೆ ಮಾಡುವುದಕ್ಕೆ ಅವನು ಸ್ಥಿತಪ್ರಜ್ಞನೇ ಆಗಿರಬೇಕು" ಎಂದು ನಿರೂಪಕನಿಗೆ ಅನಿಸುತ್ತದೆ.

ಕಾಲವನ್ನು ಕುರಿತು ಚನ್ನವೀರ ಕಣವಿ ಬರೆದ ಪದ್ಯವು ನಿರೂಪಕನಿಗೆ ಮತ್ತೆ ಮತ್ತೆ ಕಾಡಿಸಲು ಆರಂಭವಾಗುತ್ತದೆ. ಏನೂ ಮಾಡಿದರು ಕಣವಿಯವರ ಪದ್ಯದ ಹೆಸರು ಆತನಿಗೆ ನೆನಪಾಗುವುದಿಲ್ಲ. ಆದರೆ ಇದಕ್ಕಿದ್ದಂತೆ ಇಬ್ಬರು ಗೆಳೆಯರನ್ನು ಕಂಡು ಆ ಪದ್ಯದ ಹೆಸರು "ಕಾಲಾತೀತ" ಎಂದು ಆತನಿಗೆ ನೆನಪಾಗುತ್ತದೆ. ಕಣವಿಯವರ ಪದ್ಯದಲ್ಲಿ ಎಮ್ಮೆಯ ಮೇಲೆ ಕುಳಿತು ಕಾಲದ ಯಾವ ಗಡಿಬಿಡಿಯೂ ಇಲ್ಲದ ಸವಾರಿ ಹೊರಟ ದನಗಾಹಿಯ ಚಿತ್ರವೊಂದಿದೆ. ಹೀಗೆ ತಮ್ಮ ಪರಿಸರದ ಬದುಕಿನಲ್ಲಿರುವ ಸಾಮಾನ್ಯ ಸಂಗತಿಗಳ ಮೂಲಕ ಕಾಲ ಪ್ರಬಂಧವು ಪ್ರಾರಂಭವಾಗುತ್ತದೆ. ಆದರೆ ಅದು ಮುಂದೆ ಅಮೂರ್ತವೂ, ಗಂಭೀರ ಆದ ಕಾಲದ ತಾತ್ವಿಕ ಚರ್ಚೆಗೆ ತೊಡಗಿಬಿಡುತ್ತದೆ. ಇದು ಸಣ್ಣಗುಡ್ಡಯ್ಯನವರ ಪ್ರಬಂಧಗಳಲ್ಲಿರುವ ಒಂದು ತಂತ್ರಗಾರಿಕೆ ಎನ್ನಬಹುದು. ಪಾರ್ಕಿನಲ್ಲಿ ಕಾಲದ ಪರಿವೇ ಇಲ್ಲದೆ ಮಲಗಿದ ವ್ಯಕ್ತಿಯೊರ್ವನನ್ನು ಕಂಡು ಚನ್ನವೀರ ಕಣವಿಯವರ ಕವಿತೆ ಮೂಲಕ ಹಾಗೂ ಪ್ರಬಂಧವು ಕಾಲದ ಗಾಢ ವಿಶ್ಲೇಷಣೆಗೆ ತೊಡಗುತ್ತದೆ:

"ಕಾಲ ಎಂಬುದು ಅನಾದಿ, ಅನಂತ; ದೇಶದ ಅಂದರೆ ವಸ್ತುಗಳ, ಸಹಾಯವಿಲ್ಲದೆ ಕಾಲವನ್ನು ಗುರುತಿಸುವುದಕ್ಕೆ ಆಗುವುದಿಲ್ಲ ಎಂಬ ಮಾತು ನಿಜವಿರಬಹುದು. ಆದರೆ ಕಾಲದ ಪರಿಣಾಮ ವಸ್ತುಗಳ ಮೇಲೆ ಉಂಟಾಗುವ ರೀತಿ ಎಂದೂ ಅಸ್ಪಷ್ಟವಾಗಿಲ್ಲ. ಅಮೂರ್ತವೂ ಅಲ್ಲ. ನೋಡ ನೋಡುತ್ತಲೇ ಬೆಳಗಿನ ಬಿಸಿಲು ಪ್ರಖರವಾಗುತ್ತ ಮಧ್ಯಾಹ್ನದ ಬೇಗೆಯಾಗಿ ಪರಿಣಮಿಸಿ, ಹೊತ್ತು ಹಣ್ಣಾಗಿ ಪಶ್ಚಿಮದಲ್ಲಿ ಕಣ್ಮರೆಯಾಗುವುದನ್ನು; ಸಂಜೆಯಲ್ಲಿ ಕಂಡ ಮೊಗ್ಗುಗಳು ಬೆಳಗಾಗುವುದರಲ್ಲಿ ಹಿಗ್ಗಿ ಪರಿಮಳಿಸಿ ಅರಳುವುದನ್ನು; ಬಿಸಿಲಿನಲ್ಲಿ ಕಳಕಳಿಸುತ್ತ ಆಕಾಶಕ್ಕೆ ಅಭಿಮುಖವಾಗಿ ತೆರೆದು ನಿಂತ ಮರಗಳ ಪತ್ರ ಸಮುಚ್ಚಯ ಬಿಸಿಲು ಇಳಿದು ನೆರಳು ಬರುತ್ತಲೂ ಒತ್ತಿ ನಿದ್ರೆ ಹೋಗುವಂತೆ ಜೋತು ಬೀಳುವುದನ್ನೂ ಕಾಲದ ಪರಿಣಾಮವೆಂದೇ ವರ್ಣಿಸಬೇಕಲ್ಲವೆ? ಶಿಶಿರ ಋತುವಿನಲ್ಲಿ ಹಳದಿಗೆ ತಿರುಗಿದ ಬಲಿತ ಎಲೆಗಳು ಯಾರಿಗೂ ತಿಳುವಳಿಕೆ ಕೊಡದೆ ಉದುರಿ ಹೋಗುತ್ತ ಮರಗಳು ಬೋಳಾಗುವುದನ್ನು ವಸಂತದ ಉಸಿರು ತಾಗುತ್ತಲೇ ಬೋಳು ಮರಗಳು ಬೋಳಾಗುವುದನ್ನು, ವಸಂತದ ಉಸಿರು ತಾಗುತ್ತಲೇ

ಬೋಳು ಮರಗಳು ಕೊನರಿ ವಿವಿಧ ವರ್ಣದ ನವಕಾಂತಿ ಹೊಮ್ಮಿ ಮರಗಳಿಗೆ ಹೊಸ ಉಡುಗೆಯನ್ನು ಉಡಿಸುವುದನ್ನು ಕಾಲಗತಿಯೆಂದೇ ಹೇಳಬೇಕು. ನಿನ್ನೆ ಮೊನ್ನೆಯ ಮಕ್ಕಳು ಬೆಳೆದು ತಾರುಣ್ಯದ ಲಜ್ಜೆಗೆ ಒಳಪಡುವುದನ್ನು, ಹರೆಯದವರು ತಮ್ಮ ಹರಯವನ್ನು ಬೀಳ್ಕೊಡುವುದಕ್ಕೆ ಸಿದ್ಧರಾಗಿರುವ ಮೊದಲೇ ನರೆಯ ಹರಿಕಾರರನ್ನು ಮುಂದೆ ಕಳಿಸಿ ಹಿಂದಿನಿಂದ ಕಹಳೆಯೂದತ್ತ ನಡೆದು ಬರುವ ಮುಪ್ಪನ್ನು ಕಂಡು 'ಕಾಲಾಯ ತಸ್ಮೈ ನಮಃ' ಎನ್ನುವವರಾರು! ಮಣ್ಣನ್ನು ಬಗಿದುಕೊಂಡು ನಿರಾಡಂಬರವಾಗಿ ಹೊರಬಂದು ಬಹಳ ಪ್ರಯಾಸದಿಂದೆಂಬಂತೆ ಬೆಳೆಯತೊಡಗುವ ಗಿಡಗಳು ಕೆಲವು ಕಾಲ ಬಿಟ್ಟು ಪುನಃ ಬಂದು ನೋಡಿದರೆ ಎದೆ ಮಟ್ಟ ಬೆಳೆದು ನಿಂತಿರುತ್ತವೆ. ಇನ್ನು ಕೆಲವು ದಿನ ಕಳೆದು ಬಂದರೆ ತಲೆ ಎತ್ತಿ ನೋಡುವಂತಾಗಿರುತ್ತವೆ. ಆಲದ ಬೀಜವನ್ನು ನೋಡಿದವರು ದೊಡ್ಡ ಆಲದ ಮರದ ಕೆಳಗೆ ನಿಂತು ಈ ಮರ ಆ ಬೀಜದಿಂದ ಹೊರಬಂದು ರೂಪಾಂತರ ಹೊಂದಿದ್ದು ಎಂಬುದನ್ನುದೇನಿಸಿದರೆ ಕಾಲದ ಪರಿಣಾಮ ಪ್ರತ್ಯಕ್ಷವಾದೀತು. ಹತ್ತು ವರ್ಷದ ಹಿಂದೆ ನಾವು ಇದ್ದು ಬಿಟ್ಟು ಹೋದ ಊರು ಈಗ ನೋಡಿದರೆ ಗುರುತು ಸಿಗುವುದಿಲ್ಲ. ಆರು ತಿಂಗಳ ಹಿಂದೆ ಹೋಗಿದ್ದ ಕೇರಿಗೆ ಈಗ ಹೋಗಿ ನೋಡಿದರೆ ಕಣ್ಣಿಗೆ ಬಳಕೆಯಾಗಿದ್ದ ಜಾಗಗಳೆಲ್ಲ ಗುರುತು ಸಿಗದಂತಾಗಿರುತ್ತವೆ. ಇದನ್ನೆಲ್ಲ ಕಂಡಾಗ ಕಾಲ ಅಮೂರ್ತ ವಸ್ತುವೆಂದು ಹೇಳಿ ಅದೊಂದು ಅಳೆಯಲು ಬಾರದ ವಿಷಯವೆಂದು ಬಣ್ಣಿಸಲಾದೀತೇ? ಕಾಲವೇ ವಸ್ತುವಾಗಿ ಪರಾವರ್ತನೆ ಹೊಂದುತ್ತದೆ ಎನ್ನಬಹುದೇನೊ!"[೮]

ಮೇಲಿನ ಭಾಗದಲ್ಲಿ ಪ್ರಕೃತಿಯ ಬೇರೆ ಬೇರೆ ಘಟನೆಗಳನ್ನು ಉಲ್ಲೇಖಿಸಿ ಅವುಗಳ ಮೂಲಕ ಪ್ರಬಂಧಕಾರರು ಕಾಲದ ಚರ್ಚೆಯನ್ನು ಮಾಡುವುದನ್ನು ಗಮನಿಸಬಹುದು. ಇದು ಕನ್ನಡದಲ್ಲಿ ಎಲ್ಲ ಕವಿಗಳು ಅನುಸರಿಸಿಕೊಂಡು ಬಂದಿರುವ ವಿಧಾನವಾಗಿದೆ. ಉದಾಹರಣೆಗೆ ಬೇಂದ್ರೆಯವರ 'ಯುಗಾದಿ' ಪದ್ಯ. ಹದ್ದು ಪ್ರಬಂಧದಲ್ಲೂ ಕೂಡ ಸಣ್ಣಗುಡ್ಡಯ್ಯನವರು ಒಮ್ಮೆ ತಮ್ಮ ತಲೆಯ ಸಮೀಪ ಹಾರಿ ಹೋದ ಹದ್ದಿನಿಂದ ಪ್ರೇರಣೆ ಪಡೆದು ಆಳವಾದ ಚಿಂತನೆಗೆ ತೊಡಗುತ್ತಾರೆ. ನಮ್ಮ ನಿತ್ಯ ಬದುಕಿನಲ್ಲಿ ನಾವು ಎಷ್ಟೇ ಸಾಮಾನ್ಯವಾದ ಚಟುವಟಿಕೆಗಳಲ್ಲಿ ತೊಡಗಿದ್ದರು. ಕೆಲವು ಸಂದರ್ಭಗಳಲ್ಲಿ ಅವುಗಳಿಂದ ಬಿಡಿಸಿಕಂಡು ಆಕಾಶದಲ್ಲಿ ಸುತ್ತು ಹೊಡೆಯುವ ಹದ್ದಿನಂತೆ ಮೇಲಕ್ಕೇರಬೇಕು ಎಂದು ಚರ್ಚಿಸುತ್ತಾರೆ. ಹದ್ದು ಅವರಿಗೆ ಧೀರತನದ ಸಂಕೇತವಾಗಿ ಕಾಣುತ್ತದೆ. ಪುಟ್ಟ ಗಾತ್ರದ ಹದ್ದು ಜಗತ್ತನ್ನೇ ಜಯಿಸಲು ಹೊರಟ ಧೀರನಂತೆ ಆಕಾಶದಲ್ಲಿ ತನ್ನ ದೊಡ್ಡ ರೆಕ್ಕೆಗಳೊಂದಿಗೆ ಸಾಗುವುದು ಲೇಖಕರಿಗೆ ಸಾಹಸದ ಸಂಕೇತವಾಗಿ ಕಾಣುತ್ತದೆ.

ಹಾಗೆಯೇ ಕಾಲ ಪ್ರಬಂಧವು ಮನುಷ್ಯನ ಬಾಳಿನಲ್ಲಿ ಕಾಲವು ಹೇಗೆ ಪರಿಣಾಮ ಬೀರುತ್ತಾ ಹೋಗುತ್ತದೆ ಎಂಬುದನ್ನು ಚರ್ಚಿಸುತ್ತಾರೆ. ಕಾಲದ ಬೇರೆ ಬೇರೆ ಘಟ್ಟದಲ್ಲಿ ಹಾಗೂ ಬಾಲ್ಯದಿಂದ

ಮುಪ್ಪಿನ ತನಕ ಪಡೆದುಕೊಳ್ಳುವ ಅವಸ್ಥೆಯನ್ನು ಪ್ರಬಂಧವು ಚರ್ಚಿಸುತ್ತದೆ. ಹೀಗೆ ಕಾಲದ ಬಗ್ಗೆ ಚರ್ಚಿಸುತ್ತಲೇ ಪ್ರಬಂಧವೂ ಒಂದು ಜೀವನ ಚಿಂತನೆ ಆಗುತ್ತದೆ.

ಕೊನೆ ಭಾಗದಲ್ಲಿ ಪ್ರಬಂಧವು ಕಾಲವನ್ನು ಇಟ್ಟುಕೊಂಡು ಮನುಷ್ಯರ ಬದುಕಿನಲ್ಲಿ ಎದುರಿಸಬೇಕಾದ ಸಾವನ್ನು ಕುರಿತು ಚರ್ಚೆಗೆ ತೊಡಗುತ್ತದೆ. ಕಾಲವನ್ನು ಕುರಿತು ಇರುವ ಬೇರೆ ಬೇರೆ ಅರ್ಥಗಳು (ಉದಾಹರಣೆಗೆ ಉಗ್ರ, ಕಪ್ಪು, ಯಮ, ಮೃತ್ಯು, ಸಮಯ) ಹೀಗೆ ಪರಸ್ಪರ ಒಳ ಸಂಬಂಧವುಳ್ಳವು ಎಂಬುದನ್ನು ತೆರದಿಡುತ್ತದೆ. ಕಾಲದ ಬಗ್ಗೆ ಭಾರತೀಯ ಸಂಸ್ಕೃತಿ ಮತ್ತು ನಂಬಿಕೆಗಳ ಜಗತ್ತಿನಲ್ಲಿರುವ ಗ್ರಹಿಕೆಗಳನ್ನು ಹುಡುಕಿ ಚಿಂತಿಸುತ್ತದೆ. ಸಣ್ಣ ಗುಡ್ಡಯ್ಯನವರ ಚಿಂತನೆಯ ವಿಶೇಷತೆಯೆಂದರೆ ಬದುಕು, ಸಾಹಿತ್ಯ, ಚರಿತ್ರೆ, ಪುರಣ, ಭಾಷೆ ಹೀಗೆ ಬಾಳಿನ ಬೇರೆ ಬೇರೆ ಕ್ಷೇತ್ರಗಳಿಂದ ನಿದರ್ಶನಗಳನ್ನು ಹೆಕ್ಕಿಕೊಂಡು ಅವನ್ನು ಜೋಡಿಸಿ ಅರ್ಥಪೂರ್ಣವಾದ ಚಿಂತನೆಯನ್ನು ಮಾಡುವುದು.

ಸಣ್ಣಗುಡ್ಡಯ್ಯನವರು ಕಾಲ ಮತ್ತು ಏಕಾಂತಗಳ ಹಾಗೇ ಮನುಷ್ಯರ ಬಾಳಿನಲ್ಲಿ ಮತ್ತೆ ಮತ್ತೆ ಕಾಡುವ ಬೇರೆ ಬೇರೆ ಅಂಶಗಳ ಬಗ್ಗೆ ಚಿಂತನೆ ಮಾಡುತ್ತಾರೆ. ಸುಖ ('ಹದ್ದು') ಮಿತವ್ಯಯ('ಮಿತವ್ಯಯ') ಧೀರರಾಗೋಣಾ('ದಿಟ್ಟತನ'), ಸ್ವಚ್ಛತೆ ('ನಿರ್ಮಲ ಕರ್ನಾಟಕ'), ವಿಶ್ರಾಂತಿ ('ಒಂದು ಬೇಸಿಗೆಯ ದಿನ', 'ಏಕಾಂತ') ಸೌಂದರ್ಯ ('ನನ್ನತವರು', 'ಗುಡ್ಡದ ತಿಮ್ಮಪ್ಪ') ಮತ್ತು ಮಾನವೀಯತೆ ('ಇನ್ನಷ್ಟು ಹತ್ತಿರ ಬರುವುದು ಹೇಗೆ?') ಮುಂತಾದ ಪರಿಕಲ್ಪನೆಗಳ ಮೇಲೆ ಜಿಜ್ಞಾಸೆ ನಡೆಸುತ್ತಾರೆ.

ಕನ್ನಡದಲ್ಲಿ ಎ.ಎನ್ .ಮೂರ್ತಿರಾವ್ ಮತ್ತು ಪು.ತಿ.ನ ಬಿಟ್ಟರೆ ಹೀಗೆ ಚಿಂತನ ಶೀಲತೆಯನ್ನು ಲಲಿತ ಪ್ರಬಂಧಗಳಲ್ಲಿ ಅಳವಡಿಸಿದವರಲ್ಲಿ ಸಣ್ಣಗುಡ್ಡಯ್ಯನವರು ಮುಖ್ಯರಾಗುತ್ತಾರೆ. ಕೆಲವೊಮ್ಮೆ ಅವರ ಪ್ರಬಂಧಗಳಲ್ಲಿನ ಲಾಲಿತ್ಯ, ಹಾಸ್ಯ, ಸರಳತೆಗಳು ಹಿಂದಕ್ಕೆ ಸರಿದು ಚಿಂತನೆ ಜಿಜ್ಞಾಸೆ ಮುನ್ನೆಲೆಗೆ ಬರುತ್ತವೆ. ಇದಕ್ಕೆ ಕಾರಣ.

ಅ. ಸಣ್ಣಗುಡ್ಡಯ್ಯನವರು ಒಬ್ಬ ದಾರ್ಶನಿಕ ಚಿಂತಕರಾಗಿರುವುದು

ಆ. ಅಪಾರ ಅಧ್ಯಯನ ಮಾಡಿರುವ ಒಬ್ಬ ವಿದ್ವಾಂಸರಾಗಿರುವುದು

ಇ. ಸಮಾಜವನ್ನು ಆಲೋಚನೆಗೆ ಹಚ್ಚಿ ಸುಧಾರಣೆ ಮಾಡುವ ಆಶಯವನ್ನು ಹೊಂದಿರುವುದು.

ಈ. ವಿದ್ಯಾರ್ಥಿಗಳ ಮನಸ್ಸನ್ನು ರೂಪಿಸುವ ಹೊಣೆ ಹೊತ್ತ ಆದರ್ಶ ಶಿಕ್ಷಕರಾಗಿರುವುದು.

**ಕೊನೆಟಿಪ್ಪಣಿ**

೧. ಟಿ.ಎಸ್.ಲೋಹಿತಾಶ್ವ, ಏಕಾಂತ ಮತ್ತು ಇತರ ಪ್ರಬಂಧಗಳು, ಹಿನ್ನುಡಿಯಲ್ಲಿ

೨. ಎಚ್.ಜಿ.ಸಣ್ಣಗುಡ್ಡಯ್ಯ, ಹದ್ದು ಮತ್ತು ಇತರ ಪ್ರಬಂಧಗಳು ಇನ್ನಷ್ಟು ಹತ್ತಿರ ಬರುವುದು ಹೇಗೆ?, ಪು.೧೦

೩. ಎಚ್.ಜಿ.ಸಣ್ಣಗುಡ್ಡಯ್ಯ, ಹದ್ದು ಮತ್ತು ಇತರ ಪ್ರಬಂಧಗಳು ಇನ್ನಷ್ಟು ಹತ್ತಿರ ಬರುವುದು ಹೇಗೆ?, ಪು.೫

೪. ಎಚ್.ಜಿ.ಸಣ್ಣಗುಡ್ಡಯ್ಯ, ಹದ್ದು ಮತ್ತ ಇತರ ಪ್ರಬಂಧಗಳು, ಇನ್ನಷ್ಟು ಹತ್ತಿರ ಬರುವುದು ಹೇಗೆ?, ಪು.೩

೫. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಏಕಾಂತ, ಪು.೧೯

೬. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಏಕಾಂತ, ಪು.೨೦

೭. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಕಾಲ, ಪು.೯೮

೮. ಎಚ್.ಜಿ.ಸಣ್ಣಗುಡ್ಡಯ್ಯ, ಏಕಾಂತ ಮತ್ತು ಇತರ ಪ್ರಬಂಧಗಳು, ಕಾಲ, ಪು.೧೦೧

# ೫

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಲೇಖಕರನ್ನು 'ಮೇಜರ್', 'ಮೈನರ್' ಎಂಬ ವಿಭಾಗದಲ್ಲಿ ವಿಂಗಡಿಸಬಹುದಾದರೆ, ಸಣ್ಣಗುಡ್ಡಯ್ಯನವರು 'ಮೈನರ್' ಎಂದು ಕರೆಯಬಹುದಾದ ಲೇಖಕ. ಅವರು ಬರೆದಿರುವ ಸಾಹಿತ್ಯ ಬಹಳ ಕಡಿಮೆ. ಆದರೆ ಬರೆದುದಷ್ಟು ಗಟ್ಟಿಯಾದ ಸಾಹಿತ್ಯವಾಗಿದೆ. ಅವರ ಸಾಹಿತ್ಯದ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಈ ಕೆಳಕಂಡಂತಿವೆ.

೧. ಸಣ್ಣಗುಡ್ಡಯ್ಯನವರು ಸಾಹಿತ್ಯದಲ್ಲಿ ಎದ್ದು ಕಾಣುವ ಸಂಗತಿಯೆಂದರೆ ಅವರ ಸಾಮಾಜಿಕ, ರಾಜಕೀಯ, ಆರ್ಥಿಕ ಎನ್ನಬಹುದಾದ ಚಿಂತನೆಗಳು. ೨೦ನೇ ಶತಮಾನದ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರಿಂದ ದೇವನೂರು ಮಹಾದೇವ ಅವರಿಗೆ ಬರಹಗಾರರು ವಿಚಾರವಂತರೇ ಆಗಿದ್ದಾರೆ. ಅವರ ಚಿಂತನೆಗಳು ನಮ್ಮ ಸಮಾಜದ ಸಾಮಾಜಿಕ, ರಾಜಕೀಯ, ಆರ್ಥಿಕ ಚಿಂತನೆಗಳಾಗಿವೆ. ಸಣ್ಣಗುಡ್ಡಯನವರು ಇಲ್ಲಿ ಪರಂಪರೆಯಲ್ಲಿ ಬರುವ ಒಬ್ಬ ವಿಚಾರವಂತ ಲೇಖಕರಾಗಿರುವರು. ಕರ್ನಾಟಕದ ವಿಚಾರವಂತ ಲೇಖಕರು ತಮ್ಮ ಬರವಣಿಗೆಯ ಮೂಲಕ ಓದುಗರ ಮನಸ್ಸನ್ನು ತಿದ್ದುವ ಮತ್ತು ಆ ಮೂಲಕ ಸಮಾಜದಲ್ಲಿ ಬದಲಾವಣೆ ತರುವ ಆಶಯ ಇಟ್ಟುಕೊಂಡಿರುತ್ತಾರೆ. ಸಣ್ಣಗುಡ್ಡಯ್ಯನವರ ಬರಹಗಳಲ್ಲೂ ಇದೇ ಆಶಯ ಇದೆ.

೨. ಸಣ್ಣ ಗುಡ್ಡಯ್ಯನವರ ಚಿಂತನೆಯ ವಿಶಿಷ್ಟತೆಯೆಂದರೆ ಸಮತೋಲನ. ಅವರು ಆಧುನಿಕತೆ, ನಗರ ಜೀವನ, ಗ್ರಾಮೀಣ ಬದುಕು ಕುರಿತಂತೆ ವ್ಯಾಪಕವಾದ ಚಿಂತನೆಯನ್ನು ಮಾಡುತ್ತಾರೆ. ಗ್ರಾಮಗಳಲ್ಲಿರುವ ಕೇಡುಗಳನ್ನು ಕಾಣಿಸುತ್ತಲೇ ಅಲ್ಲಿರುವ ಆಧುನಿಕತೆ ಮುಕ್ತತೆಗಳನ್ನು ಕಾಣಿಸುತ್ತಾರೆ. ಹೀಗೆ ತಾವು ಯಾವ ವಿಷಯವನ್ನು ಕುರಿತು ಬರೆಯುತ್ತಾರೋ ಆ ವಿಷಯದಲ್ಲಿರುವ ಎಲ್ಲಾ ಮುಖಗಳನ್ನು ಗಮನಿಸುವುದು ಮತ್ತು ಅವುಗಳ ಬಗ್ಗೆ ಸಮತೋಲನ ಕಳೆದುಕೊಳ್ಳದೇ ವಿಶ್ಲೇಷಿಸುವುದು ಅವರ ಚಿಂತನೆಯ ಮುಖ್ಯ ಲಕ್ಷಣವಾಗಿದೆ.

೩. ಮಾನವೀಯತೆ ಸಣ್ಣ ಗುಡ್ಡಯ್ಯನವರ ಕಾವ್ಯ ಮತ್ತು ಪ್ರಬಂಧಗಳ ಮುಖ್ಯ ಅಶಯವಾಗಿದೆ. ಜಾತಿ ಮತಗಳಿಂದ ಹುಟ್ಟುವ ದ್ವೇಷ ಭಾವವನ್ನು ನಿರಾಕರಿಸುವುದು, ಜಾತಿ ಮತಗಳ ಆಚೆ ಹೋಗಿ

ಮನುಷ್ಯ ಸಂಬಂಧಗಳು ಬೇಸೆದಿರುವುದನ್ನು ಗಮನಿಸುವುದು ಅವರ ಬರಹಗಳಲ್ಲಿ ಎದ್ದು ಕಾಣುತ್ತದೆ. ಬಡವರ, ಧರ್ಮನಿತರ, ಮಹಿಳೆಯರ ಬದುಕನ್ನು ಅವರ ಬರಹವು ಕಾಳಜಿಯಿಂದ ಚಿತ್ರಿಸುತ್ತದೆ. ಈ ಹಿನ್ನೆಲೆಯಲ್ಲಿ ಸಣ್ಣಗುಡ್ಡಯ್ಯನವರ ಸಾಹಿತ್ಯವನ್ನು ಮಾನವತಾವಾದಿ ಸಾಹಿತ್ಯ ಎಂದು ಕರೆಯಬಹುದು.

೪. ಸಣ್ಣಗುಡ್ಡಯ್ಯನವರ ಬರಹದಲ್ಲಿ ನಿಸರ್ಗದ ಚಿತ್ರಗಳು ಬರುತ್ತವೆ. ಅವರೊಬ್ಬ ರೊಮ್ಯಾಂಟಿಕ್ ಮನೋಧರ್ಮದ ಲೇಖಕ. ಸೌಂದರ್ಯರಾಧನೆಯು ಅವರ ಬರಹಗಳಲ್ಲಿ ಮುಖ್ಯ ಸಂಗತಿಯಾಗಿದೆ. ಅವರ ಸಾಹಿತ್ಯದಲ್ಲಿ ಪ್ರಕೃತಿಯ ಅನೇಕ ಮುಖಗಳ ಸುಂದರ ಚಿತ್ರಗಳಿವೆ. ಮುಖ್ಯವಾದ ಸಂಗತಿಯೆಂದರೆ ನಿಸರ್ಗದ ಅನುಸಂಧಾನವನ್ನು ಮಾನವರ ಜೀವನದ ಜೊತೆ ಬೆಸೆದು ನೋಡುವುದು. ಹೀಗಾಗಿ ಅವರ ಬರಹವನ್ನು ಮಾನವೀಯ ನಿಸರ್ಗಾನುಸಂಧಾನದ ಪ್ರಯತ್ನ ಎಂದು ಕರೆಯಬಹುದು.

೫. ಸಣ್ಣಗುಡ್ಡಯ್ಯನವರ ಬರಹದ ಮುಖ್ಯ ಲಕ್ಷಣವೆಂದರೆ, ಎಲ್ಲ ಬಗೆಯ ಅಧಿಕಾರಸ್ಥ ವ್ಯವಸ್ಥೆಗಳನ್ನು ಪ್ರಶ್ನಿಸುವುದು ಮತ್ತು ವಿಮರ್ಶಿಸುವುದು. ಅದು ಜಾತಿ ಪದ್ಧತಿಯ ಸಾಮಾಜಿಕ ವ್ಯವಸ್ಥೆಯಾಗಿರಬಹುದು. ಅದು ನಾಡಿನ ಭ್ರಷ್ಟರಾಜಕೀಯ ವ್ಯವಸ್ಥೆಯಾಗಿರಬಹುದು: ಅದು ಸಿರಿವಂತರ ಆಡಂಬರದ ಬದುಕಿನ ವ್ಯವಸ್ಥೆಯಾಗಿರಬಹುದು. ಅದು ಮಾನವರೊಳಗಿನ ಕೇಡಿನ ಮನೋಧರ್ಮವಾಗಿರಬಹುದು. ಈ ಎಲ್ಲ ಬಗೆಯ ವ್ಯವಸ್ಥೆಗಳನ್ನು ಕುರಿತು ಅವರು ಕಟುವಾದ ವಿಮರ್ಶೆ ನಡೆಸುತ್ತಾರೆ. ಅದರಲ್ಲೂ ಮುಖ್ಯವಾಗಿ ನಮ್ಮ ಭ್ರಷ್ಟ ರಾಜಕೀಯ ವ್ಯವಸ್ಥೆಯನ್ನು ಕುರಿತು ತುಂಬಾ ಕಹಿಯಾಗಿ ಚಿತ್ರಿಸುತ್ತಾರೆ.

೬. ಸಣ್ಣಗುಡ್ಡಯ್ಯನವರ ಚಿಂತನೆಯ ವಿಶಿಷ್ಟತೆಯೆಂದರೆ, ಕೆಟ್ಟ ವ್ಯವಸ್ಥೆಯನ್ನು ಚಿತ್ರಿಸುವುದು ಮತ್ತು ಟೀಕಿಸುವುದು ಮಾತ್ರವಲ್ಲ. ಬದಲಿಗೆ ರಚನಾತ್ಮಕವಾಗಿ ಅದಕ್ಕೆ ಪರಿಹಾರ ಮತ್ತು ಪರ್ಯಾಯಗಳನ್ನು ಸೂಚಿಸುವ ಕೆಲಸವನ್ನು ಅವರು ಮಾಡುತ್ತಾರೆ. ಬರೀ ಟೀಕಿಸುವ ಚಿಂತನೆಗೆ ಮತ್ತೆ ಕಟ್ಟುವ ಹೊಣೆಗಾರಿಕೆ ಇರುವುದಿಲ್ಲ. ಆದರೆ ಸಣ್ಣಗುಡ್ಡಯ್ಯನವರ ಚಿಂತನೆಗೆ ಟೀಕಿಸುವ ಮತ್ತು ಪರ್ಯಾಯವನ್ನು ನಿರ್ಮಿಸುವ ಹೊಣೆಗಾರಿಕೆ ಇರುವುದು ಕಂಡುಬರುತ್ತದೆ.

೭. ಸಣ್ಣಗುಡ್ಡಯ್ಯನವರು ಜಗತ್ತಿನ ಎಲ್ಲ ದೊಡ್ಡ ಲೇಖಕರ ಚಿಂತಕರ ಪರಂಪರೆಯ ಅತ್ಯುತ್ತಮ ವಾರಸುದಾರ ಬರಹಗಾರರು. ಅವರಲ್ಲಿ ಪಂಪ, ವಚನಕಾರರು, ಕುವೆಂಪು, ರಾಮ ಮನೋಹರ ಲೋಹಿಯಾ, ಮಾರ್ಕ್ಸ್, ನೀಷೆ, ಪೆರಿಯಾರ್, ಶಿವರಾಮಕಾರಂತ, ಗೋಪಾಲಕೃಷ್ಣ ಅಡಿಗ, ಬೇಂದ್ರೆ, ಕೀರ್ತಿನಾಥ ಕುರ್ತುಕೋಟಿ ಮುಂತಾದ ಜಗತ್ತಿನ ಅತ್ಯುತ್ತಮ ಚಿಂತಕರಿಂದ ಪಡೆದುಕೊಂಡ ತಿಳುವಳಿಕೆ ಕ್ರಿಯಾಶೀಲವಾಗಿರುವುದನ್ನು ಗಮನಿಸಬಹುದು. ಅವರ ಬರಹಗಳಲ್ಲಿ ಅನೇಕರು ಅಂಥ ಚಿಂತಕರ ಮೂಲ ವಾಕ್ಯಗಳು ಕೂಡ ಉಲ್ಲೇಖಗೊಂಡಿವೆ. ಹಾಗೇ ಉಲ್ಲೇಖಗೊಳ್ಳದೇ ಇದ್ದಾಗಲೂ ಲೇಖಕರ ಚಿಂತನೆಯ ಸಾರವು ಅವರ ಬರಹಗಳಲ್ಲಿ ಇಳಿದಿರುವುದನ್ನು ಗಮನಿಸಬಹುದು.

೮. ಸಣ್ಣಗುಡ್ಡಯ್ಯನವರ ಬರಹದಲ್ಲಿ ವಿಶೇಷತೆಯೆಂದರೆ ಅಪಾರವಾದ ವಿದ್ವತ್ತಿನ ಹಿನ್ನೆಲೆ ಇರುವುದು. ಅವರ ಬರಹಗಳಲ್ಲಿ ಅವರು ಓದಿದ ನೂರಾರು ಲೇಖಕರ ನೂರಾರು ಕೃತಿಗಳ ದಟ್ಟ ಹಿನ್ನೆಲೆ ಕಂಡುಬರುತ್ತದೆ. ಆದರೆ ತಮ್ಮ ಅಪಾರ ಅಧ್ಯಯನವನ್ನು ಎಲ್ಲೂ ಓದುಗರ ಮೇಲೆ ಭಾರವಾಗಿ ಅವರು ಹೇರುವುದಿಲ್ಲ. ಬದಲಿಗೆ ಅದನ್ನು ತುಂಬಾ ಸರಳವಾದ, ಸಹಜವಾದ ತಿಳುವಳಿಕೆಯನ್ನಾಗಿ ಪರಿವರ್ತಿಸಿ ತಮ್ಮ ಅನುಭವದೊಂದಿಗೆ ಬೆರೆಸಿಕೊಡುತ್ತಾರೆ.

೯. ಸಣ್ಣಗುಡ್ಡಯ್ಯನವರು ಪ್ರಬಂಧ ಪ್ರಕಾರದಲ್ಲಿ ಕೆಲಸ ಮಾಡಿದವರು. ಅವರ ಪ್ರಬಂಧಗಳ ಹಿಂದೆ ಕನ್ನಡದ ಅತ್ಯಂತ ಶ್ರೇಷ್ಠ ಪ್ರಬಂಧಕಾರರಾದ ಎ.ಎನ್.ಮೂರ್ತಿರಾವ್, ವೀ.ಸೀತಾರಾಮಯ್ಯ, ಪ್ರಹ್ಲಾದ್ ರಾವ್, ರಾ.ಕು., ಗೊರೂರು ರಾಮಸ್ವಾಮಿ ಅಯ್ಯಂಗಾರ್ , ಕುವೆಂಪು, ತೀ.ನಂ.ಶ್ರೀಕಂಠಯ್ಯ, ಪು.ತಿ.ನ ಮುಂತಾದವರ ಪ್ರಭಾವವಿದೆ. ಆದರೆ ಆ ಪ್ರಭಾವವು ಸಣ್ಣಗುಡ್ಡಯ್ಯನವರಲ್ಲಿ ಅನುಕರಣೆ ಯಾಗಿಲ್ಲ. ಬದಲಾಗಿ ಅವರಲ್ಲಿ ಒಂದು ಪ್ರೇರಣೆಯಾಗಿ ಕೆಲಸ ಮಾಡಿವೆ. ಈ ಪ್ರೇರಣೆಯನ್ನು ಪಡೆದು ಸಣ್ಣಗುಡ್ಡಯ್ಯನವರು ಸ್ವಂತ ಪ್ರತಿಭೆ, ಅನುಭವ ಮತ್ತು ಚಿಂತನೆಯಿಂದ ತಮ್ಮದೇ ಆದ ಯಶಸ್ಸನ್ನು ಪ್ರಬಂಧಗಳಲ್ಲಿ ಸಾಧಿಸಿದ್ದಾರೆ.

೧೦. ಸಣ್ಣಗುಡ್ಡಯ್ಯನವರ ಒಟ್ಟು ಬರಹದಲ್ಲಿ ವಿನೋದದ ಅಂಶವಿದೆ. ಈ ವಿರೋಧ ಮತ್ತ ಹಾಸ್ಯ ಪ್ರವೃತ್ತಿ ಲಲಿತ ಪ್ರಬಂಧ ಪ್ರಕಾರಗಳಲ್ಲಿ ಸಹಜವಾಗಿ ಇರುವಂಥದ್ದು. ಇದು ಓದುಗರನ್ನು ಸೆಳೆಯುವ ಒಂದು ಉಪಾಯವಾಗಿದೆ. ಹಾಗೆಯೇ ಬರಹದ ಸಂವಹನ ಶೀಲತೆಗೆ ಇದು ನೆರವಾಗುತ್ತದೆ. ತೇಜಸ್ವಿ, ದೇವನೂರ ಮಹಾದೇವ, ಕುಂ.ವೀ. ಮುಂತಾದವರ ಬರಹದಲ್ಲಿ ಇದನ್ನು ಗಮನಿಸಬಹುದು. ಈ ವಿನೋದ ಪ್ರವೃತ್ತಿಗೆ ಬರಹದಲ್ಲಿ ಇನ್ನೊಂದು ಉದ್ದೇಶವಿದೆ. ಅವೆಂದರೆ ನಮ್ಮ ಪರಿಸರದಲ್ಲಿರುವ ಸಣ್ಣಪುಟ್ಟ ಸಂಗತಿಗಳನ್ನು ಗಮನಿಸುವುದು. ನಿಕೃಷ್ಟವೆಂದು ನಿರಾಕರಣೆಗೆ ಒಳಗಾದ ವಿಷಯಗಳ ಮೇಲೆ ಚಿಂತಿಸುವುದು. ಭೇದ-ಭಾವವಿಲ್ಲದೆ ಬದುಕಿನ ಎಲ್ಲ ಅನುಭವಗಳನ್ನು ಮುಟ್ಟುವುದು ಸಣ್ಣ ಗುಡ್ಡಯ್ಯನವರ ಬರಹದಲ್ಲಿ ಸಮಾಜವಾದಿ ನೋಟವು ವಿನೋದದಿಂದ ಸಾಧ್ಯವಾಗಿದೆ.

೧೧. ಒಬ್ಬ ಬರಹಗಾರ ಅನೇಕ ಪ್ರಕಾರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಆದರೆ ಅವನಿಗೆ ಎಲ್ಲ ಪ್ರಕಾರಗಳಲ್ಲೂ ಸಮಾನವಾದ ಯಶಸ್ಸು ಸಿಗುವುದಿಲ್ಲ. ಸಣ್ಣಗುಡ್ಡಯ್ಯನವರ ಗುರುಗಳಾದ ತೀ.ನಂ.ಶ್ರೀಯವರಿಗೆ ವಿದ್ವತ್ತಿನ ಕ್ಷೇತ್ರದಲ್ಲಿ ಯಶಸ್ಸು ಸಿಕ್ಕಿತು. ಪ್ರಬಂಧ ಪ್ರಕಾರದಲ್ಲಿ ಕೆಲಮಟ್ಟಿಗೆ ಯಶಸ್ಸು ಸಿಕ್ಕಿತು. ಆದರೆ ಕಾವ್ಯ ಪ್ರಕಾರದಲ್ಲಿ ಅಷ್ಟು ದೊಡ್ಡ ಯಶಸ್ಸು ಸಿಗಲಿಲ್ಲ. ಇದೇ ತೆರಹ ಸಣ್ಣಗುಡ್ಡಯ್ಯನವರು ಕವಿತೆ, ಲಲಿತ ಪ್ರಬಂಧ, ಅನುವಾದ, ಸಂಪಾದನೆ ಮುಂತಾದ ಕ್ಷೇತ್ರದಲ್ಲಿ ಕೆಲಸ ಮಾಡಿದರು. ಆದರೆ ಅವರಿಗೆ ಪ್ರಬಂಧ ಪ್ರಕಾರಗಳಲ್ಲಿ ಸಿಕ್ಕ ಯಶಸ್ಸು ಕಾವ್ಯಕ್ಕೆ ಸಿಕ್ಕಲಿಲ್ಲ

ಎನ್ನಬಹುದು. ಅವರ ಅನೇಕ ನೀರಸವಾದ ಮತ್ತು ವಾಚ್ಯವಾದ ಕವಿತೆಗಳ ಮುಂದೆ ಅವರ ಕೆಲವು ಪ್ರಬಂಧಗಳು ಶ್ರೇಷ್ಠ ಕಾವ್ಯದಂತೆ ಕಾಣುತ್ತವೆ.

## ಪರಿಸಮಾಪ್ತಿ

ಸಣ್ಣಗುಡ್ಡಯ್ಯನವರು ತಮ್ಮ ಗುರುಗಳಾದ ಕುವೆಂಪು, ತೀ.ನಂ.ಶ್ರೀ, ಡಿ.ಎಲ್ .ನರಸಿಂಹಾಚಾರ್ ಮುಂತಾದ ಶ್ರೇಷ್ಠ ಗುರುಪರಂಪರೆಯಲ್ಲಿ ಶಿಷ್ಯರಾಗಿ ಬಂದವರು. ಹೀಗಾಗಿ ಅವರಲ್ಲಿ ಸಾಹಿತ್ಯದ ಸದಭಿರುಚಿ, ಅತ್ಯುತ್ತಮ ಜೀವನ ದರ್ಶನ ಮತ್ತು ವಿದ್ವತ್ತು ಮೂರು ಸಂಗಮಗೊಂಡವು. ಸ್ವತಃ ಅವರು ಒಬ್ಬ ಜನಪ್ರಿಯ ಮತ್ತು ಶ್ರೇಷ್ಠ ಅಧ್ಯಾಪಕರಾಗಿ ತಮ್ಮ ಗುರುಪರಂಪರೆಗೆ ತಕ್ಕ ಉತ್ತರಾಧಿಕಾರಿಯಾದರು. ಒಬ್ಬ ಅತ್ಯೋತ್ತಮ ಅಧ್ಯಾಪಕರಾಗಿ ಸಾವಿರಾರು ಗ್ರಾಮೀಣ ಭಾಗದ ವಿದ್ಯಾರ್ಥಿಗಳ ಮನಸ್ಸನ್ನು ಅವರು ರೂಪಿಸಿದರು. ಇವರು ಜೊತೆಯಲ್ಲೇ ತಾವು ಬದುಕಿದ ಪರಿಸರದಲ್ಲಿ ಒಂದು ಸಾಹಿತ್ಯಕ ಮತ್ತು ವೈಚಾರಿಕ ಪರಿಸರವನ್ನು ನಿರ್ಮಿಸಿದ್ದರು. ಸ್ವತಃ ಸಾಹಿತ್ಯವನ್ನು ಸೃಷ್ಟಿಸಿ ಓದುಗರಿಗೆ ನೀಡಿದರು. ಇಂಥ ಒಬ್ಬ ವ್ಯಕ್ತಿಯಾಗಿ ಆದರ್ಶ ಬದುಕನ್ನು ಬದುಕಿದರು. ಒಬ್ಬ ನಾಗರಿಕನಾಗಿ ಸಮಾಜವನ್ನು ಸುಧಾರಿಸಲು ಬೇಕಾದ ಚಿಂತನೆಯನ್ನು ಮಾಡಿದರು. ಇಂಥ ವ್ಯಕ್ತಿಗಳು ತಾವು ಬದುಕಿದ ಕಡೆ ದೊಡ್ಡ ಪ್ರಭಾವವನ್ನು ಬಿಟ್ಟು ಹೋಗುತ್ತಾರೆ. ಕರ್ನಾಟಕದಲ್ಲಿ ಸಿಂ.ಪಿ.ಲಿಂಗಣ್ಣ, ಮಧುರಚೆನ್ನ, ಕೆ.ವಿ.ಸುಬ್ಬಣ್ಣ, ಶಾಂತರಸ, ಗೌರೀಶ ಕಾಯ್ಕಿಣಿ, ವಿಷ್ಣುನಾಯಕ ಮುಂತಾದವರು ತಾವು ಬದುಕಿದ ಪರಿಸರದಲ್ಲಿ ಒಂದು ವಿಶ್ವವಿದ್ಯಾಲಯದಂತೆ ಕೆಲಸ ಮಾಡಿದವರು. ಸಣ್ಣಗುಡ್ಡಯ್ಯನವರು ಇಂಥ ಪರಂಪರೆಗೆ ಸೇರುತ್ತಾರೆ. ಅವರ ಸಾಹಿತ್ಯವನ್ನು ಅವರು ಬಾಳಿದ ಬದುಕಿನಿಂದ ಮೌಲ್ಯಮಾಪನ ಮಾಡಬಹುದು. ಹಾಗೆಯೇ ಅವರ ಬದುಕನ್ನು ಅವರು ಬರೆದ ಬರಹದಿಂದಲೂ ಮೌಲ್ಯಮಾಪನ ಮಾಡಬಹುದು.ಸಣ್ಣಗುಡ್ಡಯ್ಯನವರ ಬದುಕು-ಬರೆಹ ಇಂತಹುದು.

## ಅನುಬಂಧಗಳು

೧. ಅಭ್ಯಾಸ ಸೂಚಿ

೨. ಸಣ್ಣಗುಡ್ಡಯ್ಯನವರ ಜೀವನ ಚರಿತ್ರೆ

೩. ಸಣ್ಣಗುಡ್ಡಯ್ಯನವರ ಕೃತಿಗಳು

೧

# ಅಭ್ಯಾಸ ಸೂಚಿ


೧. ಬರಗೂರು ರಾಮಚಂದ್ರಪ್ಪ, 'ಸಣ್ಣಗುಡ್ಡಯ್ಯ : ಸದಭಿರುಚಿಯ ಸಂಕೇತ' ಶಬ್ದವಿಲ್ಲದ ಯುದ್ಧ, ೨೦೦೭ ಅಂಕಿತ ಪುಸ್ತಕ, ಬೆಂಗಳೂರು,

೨. ಎಸ್ .ನಟರಾಜ್ ಬೂದಾಳ್ , 'ಪ್ರೊ.ಎಚ್ .ಜಿ.ಸಣ್ಣಗುಡ್ಡಯ್ಯ - ಒಂದು ನೆನಪು', ಅಗ್ನಿ, ೨೭ನೇ ಸೆಪ್ಟೆಂಬರ್ ೨೦೦೭

೩. ಸೋ.ಮು.ಭಾಸ್ಕರಾಚಾರ್, ದವನದಂಡೆ (ವ್ಯಕ್ತಿ ಚಿತ್ರಗಳು), ೨೦೦೪, ಕಿರಣ್ ಪ್ರಕಾಶನ, ತುಮಕೂರು,

೪. ಸೋ.ಮು.ಭಾಸ್ಕರಾಚಾರ್, 'ಎಚ್ .ಜಿ.ಸಣ್ಣಗುಡ್ಡಯ್ಯ' : ಶ್ರಮ ಸಂಸ್ಕೃತಿ - ಗ್ರಾಮೀಣ ಸೊಗಡಿನ ಲೇಖಕ', ಪ್ರಜಾವಾಣಿ, ೩೦ನೇ ಸೆಪ್ಟೆಂಬರ್ ೨೦೦೭

೫. ಆರ್. ಲಕ್ಷ್ಮೀನಾರಾಯಣ, 'ಹೃದಯವಂತ ಪ್ರೊ.ಎಚ್.ಜಿ.ಸಣ್ಣಗುಡ್ಡಯ್ಯ', ಪ್ರಜಾಪ್ರಗತಿ, ೭ನೇ ಅಕ್ಟೋಬರ್, ೨೦೦೭

೨

# ಸಣ್ಣಗುಡ್ಡಯ್ಯನವರ ಜೀವನ ಚರಿತ್ರೆ

ಸಣ್ಣಗುಡ್ಡಯ್ಯನವರು ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಹೊಸ ಹಳ್ಳಿಯಲ್ಲಿ ೧೯೩೩ರಲ್ಲಿ ಜನಿಸಿದರು. ಕೆಳ ಮಾಧ್ಯಮ ವರ್ಗದ ತೊಡಕು ತೊಂದರೆಗಳೊಂದಿಗೆ ಹೋರಾಡುತ್ತಲೇ ಅವರು ಉನ್ನತ ಶಿಕ್ಷಣವನ್ನು ಪಡೆದವರು. ಪ್ರಾಥಮಿಕ ವಿದ್ಯಾಭ್ಯಾಸ ಹಳ್ಳಿಯ ಕೂಲಿಮಠದಲ್ಲಿ ಆರಂಭವಾಯಿತು. ಶಿರಾ, ತುಮಕೂರುಗಳಲ್ಲಿನ ಶಿಕ್ಷಣದ ನಂತರ ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂ.ಎ.ಪದವಿಗಳಿಸಿದರು. ತಮ್ಮ ವಿದ್ವತ್ತು, ಸಭ್ಯತೆ, ಪ್ರಾಮಾಣಿಕತೆ ಹಾಗೂ ಸರಳತೆಗೆ ಹೆಸರಾಗಿದ್ದ ಕನ್ನಡದ ಮೇರು ವ್ಯಕ್ತಿತ್ವಗಳಾದ ಕುವೆಂಪು, ತೀ.ನಂ.ಶ್ರೀ, ಡಿ.ಎಲ್.ನರಸಿಂಹಾಚಾರ್ ಅವರ ಶಿಷ್ಯರಾಗಿ ಅಧ್ಯಯನ ಮಾಡುವ ಅವಕಾಶವನ್ನು ಪಡೆದಿದ್ದ ಸಣ್ಣಗುಡ್ಡಯ್ಯನವರು ಸಹಜವಾಗಿಯೇ ಅವರಿಂದ ಪ್ರಭಾವಿತರಾದವರು. ಜನಪ್ರಿಯ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿ ನಿವೃತ್ತರಾದವರು. ಪೀಪಲ್ಸ್ ಬುಕ್ ಹೌಸ್ ನಂಥ ಪುಸ್ತಕಾಲಯಗಳು, ಸೋವಿಯತ್ ದೇಶ, ಚೀನಾ, ವಿಯಟ್ನಾಮ್ ಮುಂತಾದ ಕಡೆ ಪ್ರಕಟವಟಾಗುತ್ತಿದ್ದ ಸಾಹಿತ್ಯವನ್ನು ವಿಶೇಷವಾಗಿ ಅಭ್ಯಸಿಸಲು ಕಾರಣವಾದವು. ೧೯೫೬-೫೭ರ 'ಮಧುಕರ' ಎಂಬ ನೆನಪಿನ ಸಂಚಿಕೆಯಲ್ಲಿ ಇವರ ಮೊದಲ ಕವನ ಪ್ರಕಟವಾಯಿತು.

೧೯೫೮ರಲ್ಲಿ ಎಂ.ಎ ಮುಗಿದ ಕೂಡಲೇ ತುಮಕೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕ ಹೊಂದಿ, ಅನಂತರದ ಶಿವಮೊಗ್ಗ ಮತ್ತು ಕೋಲಾರದಲ್ಲಿ ಉಪಪ್ರಾಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿ, ಸೇವಾವಧಿಯನ್ನು ತುಮಕೂರಿನಲ್ಲಿ ಮುಗಿಸಿದರು. ಇವರ ಸಹಪಾಠಿಗಳಾದ ಡಾ.ಲಕ್ಷ್ಮೀನಾರಾಯಣಭಟ್ಟ, ಪ್ರೊ.ಅ.ರಾ.ಮಿತ್ರ, ಪ್ರೊ.ಎಂ.ಎಚ್ .ಚನ್ನಯ್ಯ, ಪ್ರೊ.ಹಂಪನಾಗರಾಜಯ್ಯ ಇವರ ಸಹಪಾಠಿಗಳು.

ಮಧುಗಿರಿ ತಾಲ್ಲೂಕಿನ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಡಾ.ತಿಮ್ಮಯ್ಯ. ಖ್ಯಾತ ನಾಮರಾದ ವೀ.ಚಿ., ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯ, ಪ್ರೊ.ಜಿ.ಎಂ.ಶ್ರೀನಿವಾಸಯ್ಯ ಕಾರ್ಮಿಕ ಮುಖಂಡ ಕೆ.ರಾಮಚಂದ್ರನಾಯಕ್ ಮತ್ತು ಗೀತರಚನಕಾರ ದೊಡ್ಡರಂಗೇಗೌಡ ಇವರೆಲ್ಲ ಪ್ರೊ.ಹೆಚ್ .ಜಿ.ಸಣ್ಣಗುಡ್ಡಯ್ಯನವರ ಅಭಿಮಾನಿ

ಗೆಳೆಯರು. ಬರಗೂರು ರಾಮಚಂದ್ರಪ್ಪ, ಪ್ರೊ.ಎಸ್.ಜಿ.ಸಿದ್ಧರಾಮಯ್ಯ ರಂಗಕಲಾವಿದ ಮತ್ತು ಚಿತ್ರನಟ ಟಿ.ಎಸ್.ಲೋಹಿತಾಶ್ವ, ಕೆ.ಬಿ.ಸಿದ್ದಯ್ಯ, ಎಸ್.ನಟರಾಜ ಬೂದಾಳ್ ಇವರು ಇವರ ಶಿಷ್ಯರು.

ಸಣ್ಣಗುಡ್ಡಯ್ಯನವರು ಸ್ನೇಹಪರತೆ, ಸರಳತೆಗೆ ಮತ್ತು ಚಿಂತನಶೀಲತೆಗೆ ಹೆಸರಾದವರು. ನುಡಿದಂತೆ ನಡೆದಿಕೊಳ್ಳುವ ನಿಷ್ಠುರ ವ್ಯಕ್ತಿತ್ವವುಳ್ಳವರು. ಜಾತಿಮತಗಳ ಆಚೆ ನಿಂತು ಚಿಂತಿಸುವ ಜಾತ್ಯಾತೀತವಾದಿ. ಮಾತೆಲ್ಲ ಎಡಪಂಥ, ಬರವಣಿಗೆಯೆಲ್ಲ ಪ್ರಗತಿಪರ. ಬದುಕಿನಲ್ಲಿ ಆದರ್ಶವನ್ನು ಪ್ರೀತಿಸಿ ಅದಕ್ಕೆ ಒಪ್ಪುವ ಅಂತಸ್ಸತ್ವವನ್ನು ರೂಢಿಸಿಕೊಂಡ ವಿಚಾರವಂತ ಲೇಖಕರು. ಶ್ರಮ ಸಂಸ್ಕೃತಿಯ ಒಡಲಿನಿಂದ ನಿಷ್ಕಪಟ ಗ್ರಾಮೀಣ ಸೊಗಡನ್ನು ಹೊತ್ತು ಬೆಳೆದು ಬಂದವರು. ಜತೆಯಲ್ಲಿಯೇ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರದು ಪ್ರಮಾಣದಲ್ಲಿ ಸಮೃದ್ಧವಾದ ಬರವಣಿಗೆಯೇನಲ್ಲ. ತಮ್ಮ ಗುರುಗಳಾದ ತೀ.ನಂ.ಶ್ರೀಯವರಂತೆ ಅತ್ಯಂತ ಸಂಯಮದಿಂದ ಕೂಡಿದ ಪರಿಮಿತ ಸಂಖ್ಯೆಯ ಕೃತಿರಚನೆ. ಸಣ್ಣಗುಡ್ಡಯ್ಯನವರಿಗೆ ಕನ್ನಡದ ಹಿರಿಯ ಪ್ರಬಂಧಕಾರರಾದ ಪ್ರೊ.ಎ.ಎನ್.ಮೂರ್ತಿರಾವ್, ತೀ.ನಂ.ಶ್ರೀಕಂಠಯ್ಯ, ದ.ಬಾ.ಕುಲಕರ್ಣಿ, ರಾ.ಕು., ಪಾ.ವೆಂಕಟರಮನಾಚಾರ್ಯ, ಇವರುಗಳ ಬರಹಗಳು ಮಾರ್ಗದರ್ಶಿಗಳಾಗಿದ್ದವು. ಇವರು ಬರೆದ ಮೂರು ಸೃಜನಾತ್ಮಕ ಕೃತಿಗಳಿಗೂ (೧೯೬೨, ೧೯೯೪ ಮತ್ತು ೧೯೯೮) ಮೈಸೂರು ಸರ್ಕಾರ ಮತ್ತು ಕರ್ನಾಟಕ ಸಾಹಿತ್ಯ ಅಕಾಡಮಿಯ ಬಹುಮಾನಗಳು ದೊರೆತಿವೆ. 'ಅಭೀಪ್ಸೆ' ಕವನ ಸಂಕಲನ ೧೯೬೨ರಲ್ಲಿ ರಾಜ್ಯ ಸರ್ಕಾರ ಪ್ರಶಸ್ತಿ ಪಡೆಯಿತು.

ಶ್ರೀ.ಬಿ.ವೈಕುಂಠರಾಜು ಅವರು 'ಪ್ರಜಾವಾಣಿ'ಯ ಸಾಪ್ತಾಹಿಕ ಪುರವಣಿಯ ಉಪಸಂಪಾದಕರಾಗಿದ್ದಾಗ ಕೆಲವು ವರ್ಷ ಎಸ್ .ಜಿ.ಸಣ್ಣಗುಡ್ಡಯ್ಯನವರು ಕಾವ್ಯಗ್ರಂಥಗಳನ್ನು ವಿಮರ್ಶಿಸಿದರು. ವಿಮರ್ಶೆಯನ್ನು ಸೃಜನಶೀಲ ಸಾಹಿತ್ಯವೆಂಬಂತೆ ಪ್ರಸಿದ್ಧಿಗೆ ತಂದ ಪ್ರೊ.ಕೀರ್ತಿನಾಥ ಕುರ್ತಕೋಟಿ ಇವರ ಮೆಚ್ಚಿನ ವಿಮರ್ಶಕರು. ಹೆಚ್.ಜಿ.ಸಣ್ಣಗುಡ್ಡಯ್ಯನವರು ತುಮಕೂರು ಜಿಲ್ಲೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಗೆ ಬಂದಾಗಲೂ ತಮ್ಮ ಗೆಳೆಯರ ಹೆಸರನ್ನು ಮುಂದು ಮಾಡಿದರು. ಜಿಲ್ಲಾ ಆಡಳಿತವು ಎರಡನೇ ಬಾರಿ ರಾಜ್ಯೋತ್ಸವ ಸನ್ಮಾನಕ್ಕೆ ಕರೆದಾಗ ತನ್ನ ಸರದಿ ಆಗಿದೆ ಎಂದು ಮರೆತವರಿಗೆ ನೆನಪಿಸಿ ಹಿಂದಕ್ಕೆ ಸರಿದರು. ಸೇವಾನುಭವದ ಫಲವಾಗಿ ಒದಗಿ ಬಂದ ೯ ವರ್ಷ ಅಖಂಡವಾಗಿ ಅನುಭವಿಸಬಹುದಾಗಿದ್ದ ಪ್ರಿನ್ಸಿಪಾಲ್ ಹುದ್ದೆಯನ್ನು ಬೇರೆಯವರಿಗೆ ಬಿಟ್ಟುಕೊಟ್ಟರು. ಇವು ಇವರ ಸರಳತೆ, ತತ್ವನಿಷ್ಠೆ ಮತ್ತು ಸ್ವಾಭಿಮಾನಿ ಬದುಕಿಗೆ ಉದಾಹರಣೆಯಾಗಿವೆ.

ತಮ್ಮ ಮಗಳಿಗೆ 'ಸಮತಾ' ಎಂದು ನಾಮಕರಣ ಮಾಡಿದರು. ಇದು ಅವರ ಮಾರ್ಕ್ಸ್‌ವಾದಿ ಒಲವಿನ ಸಂಕೇತವಾಗಿತ್ತು. ತಮ್ಮ ಗುರು ತೀರ್ಥಪುರದ ತೀ.ನಂ.ಶ್ರೀಕಂಠಯ್ಯನವರ ನೆನಪಿಗಾಗಿ ಮಗನಿಗೆ 'ಶ್ರೀತೀರ್ಥ' ಎಂದು ಹೆಸರಿಟ್ಟರು. ಇದು ಅವರ ಗುರು ಭಕ್ತಿಗೆ ಸಾಕ್ಷಿ.

೭೦ರ ದಶಕದಲ್ಲಿ ತುಮಕೂರಿನಲ್ಲಿ ಮಿಂಚಿ ಮಾಯವಾದ ಪ್ರೌಢಪತ್ರಿಕೆ 'ನಿಕಷ' ಕವಿ ವೀಚಿಯವರ ಸಂಪಾದಕತ್ವದಲ್ಲಿ ಪ್ರಕಟವಾಯಿತು. ಇದರ ಹಿಂದಿನ ಪ್ರೇರಣೆ ಮತ್ತು ದುಡಿಮೆ, ಪ್ರೊ.ಹೆಚ್.ಜಿ.ಸಣ್ಣಗುಡ್ಡಯ್ಯನವರಿಗೆ ಸಲ್ಲುತ್ತದೆ. ೧೯೭೫ರ ತುರ್ತು ಪರಿಸ್ಥಿತಿಯ ಕಾಲದಲ್ಲಿ ಮೈಸೂರಿನ ಜಿ.ಎಚ್.ರಾಮರಾಯರ ಪ್ರಧಾನ ನಾಯಕತ್ವದಲ್ಲಿ ಪ್ರಕಟವಾಗುತ್ತಿದ್ದ ಮಾರ್ಕ್ಸ್‌ವಾದಿ ವಿಚಾರಗಳಿಗೆ ಮೀಸಲಾದ 'ಒಡನಾಡಿ' ಎಂಬ ಪತ್ರಿಕೆಯ ಸಂಪಾದಕ ಸಮಿತಿಯಲ್ಲಿ ಮಿಕ್ಕ ಖ್ಯಾತನಾಮರಾದ ಯು.ಆರ್. ಅನಂತಮೂರ್ತಿ ಮೊದಲಾದವರು ಕಳಚಿಕೊಂಡಾಗಲೂ ಕೊನೆಯ ತನಕ ಸಣ್ಣಗುಡ್ಡಯ್ಯನವರು ಉಳಿದುಕೊಂಡಿದ್ದರು. ತುಮಕೂರು ನಗರದಲ್ಲಿ 'ಜನತಾ ಪುಸ್ತಕಾಲಯ', 'ಸಿರಿಗನ್ನಡ ಪ್ರಕಾಶನ', 'ಅಕ್ಷಯ ಪ್ರಕಾಶನ' ಮುಂತಾದ ಸಂಸ್ಥೆಗಳನ್ನು ಕೆಲವು ಕಾಲ ಕಟ್ಟಿಕೊಂಡು ಇಲ್ಲಿನ ಸಾಂಸ್ಕೃತಿಕ ಇತಿಹಾಸಕ್ಕೆ ತಮ್ಮ ಕೊಡುಗೆಯನ್ನು ಅವರು ಕೊಟ್ಟರು.

ಶ್ರೀಯುತರು ಒಬ್ಬ ಸಾಹಿತಿಯಾಗಿ ಹಾಗೂ ಪ್ರಾಧ್ಯಾಪಕರಾಗಿ ತಾವೇ ಪುಸ್ತಕಾಲಯವನ್ನು ಪ್ರಾರಂಭಿಸಿದರು. ರಂಗ ಕಲಾವಿದರಾದ ಪ್ರಸನ್ನ, ಸಿ.ಜಿ.ಕೃಷ್ಣಸ್ವಾಮಿ, ಟಿ.ಎಸ್.ಅನಂತರಾಮು ಮೊದಲಾದವರ ಜೊತೆಗೆ ಆರಂಭಿಸಿದ 'ಸಮುದಾಯ' ಸಾಂಸ್ಕೃತಿಕ ಸಂಘಟನೆಯ ಅಧ್ಯಕ್ಷರಾಗಿ ೧೦ವರ್ಷ ಅದನ್ನು ಜೀವಂತವಾಗಿಡಲು ಶ್ರಮಿಸಿದರು. ಬಂಡಾಯ, ದಲಿತ, ಮೊದಲಾದ ಪ್ರಗತಿಪರ ಸಾಂಸ್ಕೃತಿಕ ಚಳುವಳಿಗಳ ಜೊತೆಗೆ ಸಕ್ರಿಯವಾಗಿ ಸಂಬಂಧ ಹೊಂದಿದ್ದವರು.

ಹೆಚ್ .ಜಿ.ಸಣ್ಣಗುಡ್ಡಯ್ಯನವರು ರಾಜ್ಯವಿಜ್ಞಾನ ಪರಿಷತ್ತಿನ ಬಳಗದವರ ಜೊತೆಗೆ ಕೆಲಸ ಮಾಡಿದರು. ಅನ್ಯಾಯವನ್ನು ವಿರೋಧಿಸುವ, ದೌರ್ಜನ್ಯ ದಬ್ಬಾಳಿಕೆಗಳನ್ನು ಪ್ರತಿಭಟಿಸಿ ನಿಲ್ಲುತ್ತಿದ್ದರು. ಹೀಗೆ ದೊಡ್ಡ ಬದುಕನ್ನು ಬದುಕಿದ ಹೆಚ್.ಜಿ.ಸಣ್ಣಗುಡ್ಡಯ್ಯನವರು ಸೆಪ್ಟೆಂಬರ್ ೧೭, ೨೦೦೭ರಂದು ನಿಧನರಾದರು.

# ಸಣ್ಣಗುಡ್ಡಯ್ಯನವರ ಕೃತಿಗಳು

೧. ಏಕಾಂತ ಮತ್ತು ಇತರ ಪ್ರಬಂಧಗಳು, ೧೯೯೩, ಅಕ್ಷಯ ಪ್ರಕಾಶನ, ತುಮಕೂರು

೨. ಹದ್ದು ಮತ್ತು ಇತರ ಪ್ರಬಂಧಗಳು, ೧೯೯೮, ನಮ್ಮ ಪ್ರಕಾಶನ, ತಿಪಟೂರು

೩. ಅಭೀಪ್ಸೆ, ೧೯೬೧, ಅಕ್ಷಯ ಪ್ರಕಾಶನ, ತುಮಕೂರು

೪. ವಸಂತದ ಕನಸುಗಳು, ೨೦೦೪, ಅಕ್ಷಯ ಪ್ರಕಾಶನ, ತುಮಕೂರು

೫. ಭಿನ್ನ, ೨೦೦೪, ಅಕ್ಷಯ ಪ್ರಕಾಶನ, ತುಮಕೂರು

೬. ಭಾಸ ರಾಮಾಯಣ(ಪ್ರತಿಮಾನಾಟಕದ ಪರಿಷ್ಕೃತ ಕಥನ ರೂಪಕ), ೧೯೯೭, ಅಕ್ಷಯ ಪ್ರಕಾಶನ, ತುಮಕೂರು

೭. ತೀ.ನಂ.ಶ್ರೀಕಂಠಯ್ಯ(ವ್ಯಕ್ತಿತ್ವ ಮತ್ತು ಕೃತಿಗಳ ಸಮೀಕ್ಷೆ), ೧೯೯೨, ಅಕ್ಷಯ ಪ್ರಕಾಶನ, ತುಮಕೂರು

೮. ಪಾರಿಜಾತದ (ಹೊಸಗನ್ನಡದ ಪ್ರಣಯ ಕವಿತೆಗಳ ಸಂಕಲನ) (ಸಂಪಾದನೆ), ೧೯೮೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೯. ಹೊಸಗನ್ನಡ ಸ್ವಪ್ನ ವಾಸವದತ್ತ (ಭಾಸಕವಿಯ ಸಂಸ್ಕೃತ ನಾಟಕದ ಅನುವಾದ), ಅಕ್ಷಯ ಪ್ರಕಾಶನ, ತುಮಕೂರು

